ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ.

# A Funny Death!

(A social farce)

# ಮೋಜಿನ ಮರಣ!

(ಒಂದು ಸಾಮಾಜಿಕ ಪ್ರಹಸನ)

ಲೇಖಕ:—

**ಕೈ. ವಾ. ಶಂಕರ ಅಣ್ಣಾಜಿ ಕುಲಕರ್ಣಿ, ಸೂಲವಿ.**

ಪ್ರಕಾಶಕ.

**ಭಿ. ಪ. ಕಾಳೆ,**

ಪ್ರೊಪ್ರೈಟರ, ಶ್ರೀಶೇಷಾಚಲ ಗ್ರಂಥಮಾಲಾ, ಆನಂದವನ.

[೨ನೇ ಮುದ್ರಣ]

ಮಾರ್ಚ ೧೯೩೬

ನುಣುಪು ಕಾಗದದ ಪ್ರತಿಗೆ ೧೦ ಆಣೆ } **ಬೆಲೆ** { ಉರುಟು ಕಾಗದದ ಪ್ರತಿಗೆ ಆಣೆ

# ನಿವೇದನ.

ಇದೊಂದು ಸಾಮಾಜಿಕ ಪ್ರಹಸನ ಬಂಗಾಲೀ ಭಾಷೆಯೊಳಗಿನ "ಲಕ್ಷ ಟಾಕಾ" ಎಂಬುದರ ಮನೋಹರವಾದ ರೂಪಾಂತರ. ಇದು ಒಳ್ಳೇ ಮನೋರಂಜಕವೂ, ಬೋಧಪ್ರದವೂ ಆಗಿರುತ್ತದೆ.

ಹೆಂಗಸರ ಹಾಗು ಹೆಸರ ಮಾತಿನಲ್ಲಿಯೇ ಕೇವಲ ವಿಶ್ವಾಸವಿಟ್ಟು ನಡೆಯುವ ವಿಲಾಸಿಗಳ ಗತಿಯು ಕಡೆಗೆ ಹೇಗೆ ಆಗುತ್ತದೆಂಬದೂ, ದುಡ್ಡಿನ ವ್ಯಾಮೋಹಕ್ಕೊಳಪಟ್ಟ ಸ್ತ್ರೀಪುರುಷರು ಎಂಥ ಎಂಥ ಹೇಯ ಕೆಲಸಗಳಿಗೂ ಹೇಗೆ ಮನಸ್ಸು ಮಾಡಬೇಕಾಗುವದೆಂಬದೂ ಈ ಪ್ರಹಸನ ವಾಚನದಿಂದ ಚೆನ್ನಾಗಿ ಮನವರಿಕೆಯಾಗುವಂತಿದೆ

ಇಂಥ ಸುಮನೋಹರ ಪುಸ್ತಕವನ್ನು ಶ್ರೀ ಶೇಷಾಚಲ ಗ್ರಂಥಮಾಲೆಗಾಗಿ ಬರೆಕೊಟ್ಟಿರುವ ನಮ್ಮ ಮಿತ್ರ ಶ್ರೀಯುತ ಶಂ. ಅ. ಕುಲಕರ್ಣಿಯವರ ಆಭಾರವನ್ನು ಮನ್ನಿಸಿ, ಅವರಿಗೆ ದೀರ್ಘಾಯುರಾರೋಗ್ಯಗಳನ್ನು ದಯಪಾಲಿಸಲೆಂದು ಶ್ರೀ ಶೇಷಾಚಲ ಸದ್ಗುರುವನ್ನು ಕುರಿತು ಅನನ್ಯಭಾವದಿಂದ ಪ್ರಾರ್ಥಿಸುವೆವು.

—ಪ್ರಕಾಶಕ.

ಇದನ್ನು ಛಿ. ಪ. ಕಾಳೆ ಇವರು ಆನಂದವನ-ಅಗಡಿಯೊಳಗಿನ ತಮ್ಮ
**ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ** ಛಾಪಿಸಿದರು.




## ೧ನೇ ಅಂಕ

### [ಮೊದಲನೆಯ ಪ್ರವೇಶ]

[ಬಂಡೇರಾಯನ ಮನೆಯ ಬಾಗಿಲಲ್ಲಿ ಕೆಂಚನು ನಿಂತಿದ್ದಾನೆ. ಬಾಕಿಯ ವಸೂಲಿಗೆಂದು ಬಂದ ಇಬ್ಬರು ಸಾವುಕಾರರು ಮನೆಯ ಬಿಟ್ಟು ಹೊರಟಿದ್ದಾರೆ. ಕೆಂಚನು ಸಾವುಕಾರರನ್ನು ನೋಡುತ್ತ ನಿಂತಿದ್ದಾನೆ. ಸಾವುಕಾರರು ಹೋದುದನ್ನು ತಿಳಿದ ಬಂಡೇರಾಯನು ಕೆಂಚನ ಹತ್ತಿರ ಬಂದು ಅವನ ಬೆನ್ನ ಮೇಲೆ ಕೈಯಿಟ್ಟನು. ಕೆಂಚನು ಒಡೆಯನ ಕಡೆಗೆ ನೋಡುತ್ತಿದನು]

ಬಂಡೇರಾಯ(ಮೆಲ್ಲನೆ):—ಹೋದರೆ?

ಕೆಂಚ:—ಹೋದರು.

ಬಂಡೇರಾಯ:—ನೀನು ಒಳ್ಳೆ ಹಂಚಿಕೆಯಿಂದ ಅವರನ್ನು ಹೊರ ದೂಡಿದೆ! ಇಲ್ಲದಿದ್ದರೆ, ಅವರು ಬಾಕಿಯ ವಸೂಲ ಮಾಡಿಕೊಳ್ಳದೆ ಹೊರ ಹೊರಡುತ್ತಿದ್ದಿಲ್ಲ! ನೀನು ಬಹು ಬುದ್ಧಿವಂತನು!

ಕೆಂಚ:—ನೀವು ಸುಮ್ಮನೆ ಒಳಗೆ ಹೋಗಿರಿ; ನಿಶ್ಚಿಂತರಾಗಿರಿ. ಇನ್ನು ಒಂದು ವಾರದ ವರೆಗೆ ಅವರು ನಿಮ್ಮ ಹೊಸ್ತಿಲವನ್ನು ಮೆಟ್ಟರು.

ಬಂಡೇರಾಯ (ಖೇದದಿಂದ):—ಇವರಿಬ್ಬರೇ ಅಲ್ಲ. ಸಾವುಕಾರರ ತಂಡವು ಕುರಿಯ ಹಿಂಡಿನಂತೆ ಎಣಿಕೆಯಿಲ್ಲದಾಗಿದೆ ಒಬ್ಬನನ್ನು ಸಮಾಧಾನ ಪಡಿಸಿ ಕಳಿಸುವಷ್ಟರಲ್ಲಿ ಬೇರೆ ಇಬ್ಬರು ಬಂದು ನಿಲ್ಲುವರು. ಅವರ

ಮೋರೆಯ ಮೇಲೆ ಕೈ ಎಳೆದು ಕಳುಹುವಷ್ಟರೊಳಗೆ ಮತ್ತೆ ನಾಲ್ವರು ಎದು ರಾಗುವರು. ಇವರಿಗೆ ಏನ ಮಾಡಬೇಕು? ರಕ್ತಬೀಜನ ವಂಶಿಕರಂತಿದ್ದಾರೆ! ಕಟ್ಟಾ ಜನರು! ಕೃಪಣರು! ಕ್ಷುದ್ರಮನಸ್ಸಿನವರು! ನೂರಾರು ರೂಪಾಯಿ ಗಳನ್ನು ಸಾಲಕೊಟ್ಟದ್ದರೇನಾಯಿತು? ದಿನಾಲು ನನ್ನ ಮನೆಗೆ ಹೀಗೆ ಎಡ ತಾಕಿ ಎಡತಾಕಿ ತೊಂದರೆ ಕೊಡಬೇಕೆ?

ಕೆಂಚ:—ಮಹಾ ಮೂರ್ಖರು! ದುಡ್ಡನ್ನು ಎಂದೂ ಕಾಣದಿದ್ದವ ರಂತೆ ಮಾಡುವರು! ಆ ಸಾವುಕಾರರು ದಡ್ಡರು. ಹಣವನ್ನು ಸಾಲ ಕೊಟ್ಟಿರುವಿರಿ. ಕಾಲಮೇಲೆ ಕಾಲ ಹಾಕಿಕೊಂಡು ಮನೆಯಲ್ಲಿ ಸುಮ್ಮನೆ ಕುಳಿತುಕೊಳ್ಳಬಾರದೆ? ದಿನಾಲು ಬಡ್ಡಿಯು ತಾನೇ ತಾನಾಗಿ ಬೆಳೆಯು ತ್ತದೆ. ಅವರಿಗಿದರಲ್ಲಿ ಹಾನಿಯೆ? ಒಮ್ಮೆಲೆ 'ಝಣ್ ಝಣ್' ಎಂದು ರೂಪಾಯಿ ಎಣಿಸಿಕೊಳ್ಳುವರು!

ಬಂಡೇರಾಯ:—ನನಗೆ ಕೊಂಚವಾದರೂ ಶಾಂತಿಯು ಬೇಡವೆ? ನಾನೇನು ಇವರ ಬಳಿಯಲ್ಲಿ ನಿರರ್ಥಕ ಸಾಲ ಮಾಡಿರುವೆನೆ? ನನ್ನ ಹತ್ತಿರ ಹಣದ ಅಭಾವವಾದ್ದರಿಂದ-ನನಗೆ ಹಣವು ಅವಶ್ಯವಾಗಿ ಬೇಕಾದ್ದರಿಂದ-ಇವರ ಹತ್ತಿರ ಸಾಲ ತರಬೇಕಾಯಿತು!

ಕೆಂಚ:—ಅಹುದು ಧನಿಯರೆ, ಅಹುದು. ಅಭಾವವಾಗದಿದ್ದರೆ ಯಾ- ವನೂ ಸಾಲಬೇಡಲಿಕ್ಕೆ ಹೋಗಲಾರನು. ನಿಮಗೆ ಹಣದ ಅಡಚಣಿಯಾಗ ದಿದ್ದರೆ, ನೀವು ಆ ಮುಂಡೇಮಕ್ಕಳ ಮನೆಗೆ ಸಾಲ ಕೇಳಲಿಕ್ಕೆ ಹೋಗುತ್ತಿದ್ದಿರಾ?

ಬಂಡೇರಾಯ:—ಆಗಲಿ. ಹಣವು ಕೈ ಸೇರುತ್ತಲೇ ಎಲ್ಲ ಸಾಲ ವನ್ನು ತೀರಿಸಿ ಬಿಡುವೆನು. (ತನ್ನಲ್ಲಿಯೇ) ಏನ ಮಾಡಲಿ? ಎಷ್ಟು ಆಲೋ ಚಿಸಿದರೂ ಧನಸಂಪಾದನೆಯ ದಾರಿಯು ತೋರಲೊಲ್ಲದು!

ಕೆಂಚ:—ಧನಿಯರೆ, ವ್ಯರ್ಥವಾಗಿ ಯಾಕೆ ಚಿಂತಿಸುವಿರಿ? ಒಳಗೆ ಹೋಗಿರಿ. ಸ್ವಸ್ಥವಾಗಿರಿ. ನಿಮಗೆ ಯಾವ ಚಿಂತೆಯೂ ಬೇಡ. ದಿನದಂತೆ ಆನಂದದಿಂದ ಹೊತ್ತುಗಳೆಯಿರಿ.

ಬಂಡೇರಾಯ:—ಹೋಗುವೆನು. ನೀನು ಎಚ್ಚರದಿಂದಿರು. ಸಾವು ಕಾರರ ಉಪದ್ರವವು ನನಗೆ ತಗಲದಂತೆ........

ಕೆಂಚ [ನೇಪಥ್ಯದ ಕಡೆಗೆ ನೋಡಿ]:—ಓಡಿರಿ, (ಬಂಡೇರಾಯನನ್ನು ಮೆಲ್ಲನೆ ದೂಡಿ) ಓಡಿ ಹೋಗಿರಿ........

ಬಂಡೇರಾಯ (ಭಯಗ್ರಸ್ತನಾಗಿ):—ಏಕೊ?

ಕೆಂಚ:—ಅಲ್ಲಿ ನೋಡಿರಿ. ಒಬ್ಬನು ಬರುತ್ತಿರುವನು. ಸಾವುಕಾರನೇ ಇರಬಹುದು. ಹೋಗಿರಿ. ಓಡಿ ಹೋಗಿರಿ. ಪಾರಾಗಿರಿ.........

ಬಂಡೇರಾಯ:—ನೀನು ಇವನಿಗೆ ಏನೆಂದು ಹೇಳುವೆ? ಇವನನ್ನು ಹೇಗೆ ಸಮಾಧಾನಪಡಿಸಿ ಕಳಹುವೆ?

ಕೆಂಚ:—ನಿಮಗಿದರ ಚಿಂತೆ ಬೇಡ! ನಾನಿದ್ದೇನೆ; ಸಾವುಕಾರರಿದ್ದಾರೆ. ನನಗೂ ಅವರಿಗೂ ಗಂಟು. ನೀವು ಸುಮ್ಮನೆ ಒಳಗಿದ್ದು, ಹೊರಗಿನ ಮೋಜು ನೋಡುತ್ತಿರಿ. ನನ್ನ ಕುಶಲತೆಯನ್ನು ಕಂಡು ಕೌತುಕಬಡಿರಿ.

ಬಂಡೇರಾಯ:— ಹೋಗುವೆನು. (ಹೋಗುವನು.)

ಕೆಂಚ:—ಅಲ್ಲೊಬ್ಬ ಲಕ್ಷ್ಮೀಪುತ್ರನು ಬರುತ್ತಿರುವನು. ಇವನಿಗೆ ಏನೆಂದು ಹೇಳಲಿ? ಈ ರಾಜಮಾನ್ಯ ರಾಜಶ್ರೀಗಳು ಒಮ್ಮೆಲೆ ಬಂದುಬಿಟ್ಟಿದ್ದರೆ, ನನಗೆ ಹೀಗೆ ಬೇರೆ ಬೇರೆ ಉತ್ತರಗಳನ್ನು ಹುಡುಕುವ ಹೋರೆಯು ಹತ್ತುತ್ತಿರಲಿಲ್ಲ. ಆಗಲಿ. ಹೊತ್ತು ಬಂದಂತೆ ಕೊಡೆ ಹಿಡಿಯುವದು ಬಿಡದು!

(ಒಬ್ಬ ಮಾರವಾಡಿಯು ಬರುವನು)

ಮಾರವಾಡಿ:—ಎಲೋ, ಬಂಡೇರಾಯರು ಮನೆಯಲ್ಲಿದ್ದಾರೆಯೊ? ಇಲ್ಲವೆ ಕೋಚೀನದ ಕಡೆಗೆ ಕೊಬ್ಬರಿ ಎಣ್ಣೆಯ ಖರೀದಿಗೆಂದು ಹೋಗಿದ್ದಾರೆಯೊ? (ಕೆಂಚನು ನಗತೊಡಗುವನು.) ಯಾಕೆ? ನಗುತ್ತಿರುವಿಯೇಕೆ? ನಗಲಿಕ್ಕೇನಾಯಿತು? (ಕೆಂಚನು ಮತ್ತಿಷ್ಟು ನಗಹತ್ತಿದನು.) ಇಷ್ಟೇಕೆ ನಗುವಿಯೊ? ಆದದ್ದಾದರೂ ಏನಾಯಿತು? ಹೇಳು ನೋಡೋಣ!

ಕೆಂಚ:—ನೀನು ಬಹು ಬುದ್ಧಿವಂತ........(ಗಟ್ಟಿಯಾಗಿ ನಗಹತ್ತಿದನು.)

ಮಾ:—ಹೌದು ನಾನು ಬುದ್ಧಿವಂತನೇ ಸರಿ; ಆದರೆ ನೀನು ಹೀಗೆ ನಗುತ್ತಿರುವುದೇಕೆ? (ಕೆಂಚನು ಮತ್ತೂ ಹೆಚ್ಚಾಗಿ ನಗಹತ್ತಿದನು.) ಎಲೋ, ಹೀಗೆ ಹುಡುಗಾಟವಾಡಿದರೆ ನಡೆಯದು! ನಾನು ಇಂದು ಹಣವನ್ನು ವಸೂಲ ಮಾಡಿಕೊಳ್ಳದೆ, ಈ ಸ್ಥಳ ಬಿಟ್ಟು ಉಲುಕುವದಿಲ್ಲ, ತಿಳಿಯಿತೇ? ನನಗೆ

ಕೊಡತಕ್ಕ ಹಣವು ಎಷ್ಟೆಂಬದು ಗೊತ್ತುಂಟೆ?

ಕೆಂಚ:—ಗೊತ್ತಿರದೇನು; ನನಗೆ ಅರಿಯದ್ದು ಯಾವದೂ ಇಲ್ಲ! ಮುನ್ನೂರಾ ಮೂವತ್ತೇಳು ರೂಪಾಯಿ, ಹನ್ನೊಂದಾಣೆ, ಏಳು ಪೈ ಇಷ್ಟೇ ಅಲ್ಲವೆ?

ಮಾ:—ಅಲ್ಲ, ಇನ್ನೂ ಅಷ್ಟಾಗಿಲ್ಲ ಜಮಾಖರ್ಚಿನ ಪಟ್ಟಿಯು ಹತ್ತಿರಿದೆ. ನೋಡಿ ಸರಿಯಾಗಿ ಹೇಳುತ್ತೇನೆ (ಕಿಸೆಯೊಳಗಿನ ಬಾಕಿ ಪಟ್ಟಿಯನ್ನು ಹೊರದೆಗೆದು ನೋಡಿ) ಇಲ್ಲಿ ನೋಡು, ಬಂಡೇರಾವ ಬಾಯ್ಕುಳಿ.... ಇನ್ನೂರಾ ಹತ್ತೊಂಬತ್ತು ರೂಪಾಯಿ, ಮೂರಾಣೆ, ಎರಡು ಪೈ.... ಇಂದಿನ ಮಧ್ಯಾಹ್ನದ ವರೆಗಿನ ಬಡ್ಡಿಯನ್ನು ಕೂಡಿಸಿ ಬಾಕಿ ಇಷ್ಟು ಹೊರಟಿದೆ.

ಕೆಂಚ:—ಇಷ್ಟೇಯೊ? ತೀರ ಸಾಮಾನ್ಯವಾದ ಹಣ! ಇಷ್ಟಕ್ಕಾಗಿ ಹೀಗೆ ಹಗಲೆಲ್ಲ ಯಾಕೆ ಎಡತಾಕುತ್ತಿರುವೆ? ಬೇರೆ ಉದ್ಯೋಗವೇನೂ ಇಲ್ಲವೆ?

ಮಾ:—ಏನ ಹೇಳಲಪ್ಪಾ? ಸಾಮಾನ್ಯ ಮನುಷ್ಯನು ನಾನು ಬಾಕಿಯು ಅಸಾಮಾನ್ಯವಾಗುವ ವರೆಗೆ ತಡೆಯಲಾರೆನು. ಬಾಕಿಯ ರಕಮನ್ನು ಕೇಳಿಕೊಂಡಿಯಷ್ಟೆ? ಇನ್ನು ಮುಂದಿನ ಮಾತಾಡು.

ಕೆಂಚ:—ಶೇಟ್ಜಿ, ಚಿಂತಿಸಬೇಡ. ನಮ್ಮ ರಾಯರು ನಿನ್ನ ಯಾವತ್ತು ಹಣವನ್ನು ತೀರಿಸಿ ಬಿಡುವ ಸಂಕಲ್ಪ ಮಾಡಿಕೊಂಡಿದ್ದಾರೆ

ಮಾ:—ಇದು ನಿಮ್ಮ ರಾಯರ ಪರಮಾನುಗ್ರಹವು!

ಕೆಂಚ:—ನಮ್ಮ ರಾಯರ ಅನುಗ್ರಹವು ನಿನ್ನ ಅನುಗ್ರಹದಂತೆ ಅಸಾಮಾನ್ಯವಾದುದಲ್ಲ; ಅದು ತೀರ ಸಾಮಾನ್ಯವಾದದ್ದು.

ಮಾ:—ಆ ಅನುಗ್ರಹವು ಸಾಮಾನ್ಯವೇ ಇರಲಿ, ಅಸಾಮಾನ್ಯವೇ ಇರಲಿ; ಹೇಗಿದ್ದರೂ ಉಪಯುಕ್ತವೇ! ಇನ್ನು ಆ ಅನುಗ್ರಹವನ್ನು ತೋರ್ಪಡಿಸುವ ಸಮಯವನ್ನಷ್ಟು ಸೂಚಿಸಿಬಿಡು!

ಕೆಂಚ:—ಇನ್ನು ನಾನು ಇದನ್ನೇ ಹೇಳತಕ್ಕವನಿದ್ದೆನು. ನಿನಗೆ ಕೊಂಚ ವಿಲಂಬವನ್ನೂ ಸಹಿಸಲಿಕ್ಕಾಗಲಿಲ್ಲ. ಆಗಲಿ. ಹೇಳುವೆನು ಕೇಳು. ನಿನ್ನ ಹೆಸರೇನು? ಸುಡುಗಾಡು.... ಮರೆತೇ ಹೋಗಿದೆ!

ಮಾ:—ನನ್ನ ಹೆಸರು ಸುಡುಗಾಡು ಅಲ್ಲ, ಜಠರಮಲ್ಲ. ನಿತ್ಯದಲ್ಲೂ

ಈ ಮನೆಗೆ ಬರುತ್ತಿದ್ದೇನೆ. ದಿನಾಲೂ ಹೆಸರ ಕೇಳುತ್ತಿರುವೆ? ಎಷ್ಟು ಮರವಿನ ಸ್ವಭಾವವಪ್ಪಾ ನಿನ್ನದು!

ಕೆಂಚ:— ಶೇಟಜೀ, ನೀನು ಈ ಮನೆಗೆ ಒಬ್ಬನೇ ಬರುವಿಯಾದರೂ, ಬಾಕಿಯ ವಸೂಲಿಗೆಂದು ಈ ಮನೆಗೆ ಸುಳಿದಾಡುವ ಸಾವುಕಾರರು ಅಸಂಖ್ಯರಾಗಿದ್ದಾರೆ ನಿಮ್ಮೆಲ್ಲರ ಹೆಸರುಗಳನ್ನು ನಾನು ಹೇಗೆ ಪಾಠಮಾಡಿಡಲಿ? ಅಂತಹ ಸ್ಮರಣಶಕ್ತಿಯು ನನಗಿದ್ದರೆ, ಹೀಗೆ ದಡ್ಡನಾಗಿ ಈ ಮನೆಯ ಕಾವಲುಗಾರನ ಹೋರೆಯನ್ನು ಕೈಕೊಳ್ಳುತ್ತಿದ್ದೆನೆ?........

ಮಾ:— ಇರಲೆಪ್ಪಾ ಇರಲಿ. ನಿನ್ನ ಪುರಾಣವನ್ನು ನಾಕುಮಾಡು. ನನಗೆ ಸರಿಯಾದ ಉತ್ತರವನ್ನು ಕೊಡು.

ಕೆಂಚ:— ಸರಿಯಾದ ಉತ್ತರವೆ? ಅದಕ್ಕೇನು ಕೊರತೆ? ಹೇಳುತ್ತೇನೆ ಕೇಳು ಕೇಳಿ ಆತ್ಮಾನಂದವನ್ನನುಭವಿಸು! ಮೊದಲು ನನ್ನೊಡೆಯರು ಕೊಬ್ಬರಿಯೆಣ್ಣೆಯಂತಹ ಕ್ಷುದ್ರ ವ್ಯಾಪಾರವನ್ನು ಕೈಕೊಂಡದ್ದೇನೋ ನಿಜ; ಆದರೆ ಆ ಸಣ್ಣ ವ್ಯವಹಾರವು ಅವರಿಗೆ ಮಾನಿಸಲಿಲ್ಲ. ಆದುದರಿಂದ ಅವರು ಚಿಲ್ಲರೆ ವ್ಯಾಪಾರವೆಲ್ಲವನ್ನೂ ಬಿಟ್ಟುಗೊಟ್ಟು, ದೊಡ್ಡ ವ್ಯವಹಾರವನ್ನು ವಹಿಸಿದ್ದಾರೆ; ಮುತ್ತು-ರತ್ನಗಳ ವ್ಯಾಪಾರದಲ್ಲಿ ತೊಡಗಿದ್ದಾರೆ. ಇದಕ್ಕೋಸುಗ ಅವರು ನಿನ್ನೆಯೇ ಮುಂಬಯಿಗೆ ಹೊರಟಿದ್ದಾರೆ. ಮುಂಬಯಿಗೆ ಹೋದ ತರುವಾಯ ಏಳು ಹಡಗಗಳನ್ನು ತಕ್ಕೊಂಡು ರಾಮೇಶ್ವರದ ಕಡೆಗೆ ಮುತ್ತುಗಳನ್ನು ಸಂಗ್ರಹಿಸುವದಕ್ಕೆ ಹೊರಡತಕ್ಕವರಿದ್ದಾರೆ. ಶೇಟಜೀ, ನೀನು ಮುತ್ತಿನ ವ್ಯವಹಾರವನ್ನು ಬಲ್ಲೆಯಾ?

ಮಾ:— ನಾನರಿಯೆನಪ್ಪಾ!

ಕೆಂಚ:— ಶೇಟಜಿ, ಏನು ಹೇಳಲಿ? ಒಂದಲ್ಲ ಎರಡಲ್ಲ; ಏಳು ಹಡಗಗಳು! ನನ್ನ ಒಡೆಯರು ಏಳು ಹಡಗಗಳ ಅಧಿಪತಿಗಳು! ಆ ಹಡಗಗಳೇನು ಸಣ್ಣವೆ? ಒಂದೊಂದು ಹಡಗವು ನಮ್ಮ ಈ ಹುಬ್ಬಳ್ಳಿಯ ಪಟ್ಟಣಕ್ಕಿಂತಲೂ ದೊಡ್ಡದು! ಇಂತಹ ಏಳು ಹಡಗಗಳನ್ನು ತಕ್ಕೊಂಡು ಮುತ್ತು ತುಂಬಿ ತರುವದಕ್ಕಾಗಿ ನನ್ನ ಯಜಮಾನರು ಕಡಲಪ್ರಯಾಣ ಮಾಡುತ್ತಿರುವರು!

ಮಾ:— ನನಗೆ ನಿನ್ನ ಆ ಧನಿಯ ಹಡಗಗಳು ಬೇಕಿಲ್ಲ! ನನ್ನ ಬಾಕಿಯ

ವಸೂಲಿಯು ಬೇಕು!

ಕೆಂಚ:—ಶೇಡ್ಜಿ, ಹೀಗೇಕೆ ಅವಸರ ಮಾಡುವೆ? ಏಳರಲ್ಲಿ ಹುಟ್ಟಿರುವಿಯೋ-ಏನು? ಸಾವಧಾನತೆಯಿಂದ ಕೇಳಿಕೊಳ್ಳು. ನಾನು ಎಲ್ಲವನ್ನೂ ಹೇಳುತ್ತೇನೆ. ನನ್ನ ಒಡೆಯರ ಹಡಗುಗಳು ಸಂಚರಿಸುವ ಸ್ಥಳದಲ್ಲಿ ಭೂಮಿಯಿಲ್ಲ; ನೀರೇ ನೀರು! ಎಲ್ಲಿ ನೋಡಿದರೂ ನೀರು! ಕರ್ರಗಿನ ನೀರು! ಯಾವ ಕಡೆಗೆ ನೋಡಿದರೂ ನೆಲವಿಲ್ಲ, ಗಿಡ-ಗಂಟಿಗಳಿಲ್ಲ, ಜನಮಾನವರಿಲ್ಲ, ಪಶು-ಪಕ್ಷಿಗಳಿಲ್ಲ, ಅನಂತವಾದ ಅಂಬು ರಾಶಿ!

ಮಾರ:—ಹೌದಪ್ಪಾ ಹೌದು! ಇನ್ನು ಆ ನೀರಿನ ಸುದ್ದಿಯನ್ನು ಬಿಟ್ಟು, ನನ್ನ ಬಾಕಿಯ ಬಗ್ಗೆ ಮಾತನಾಡು.

ಕೆಂಚ:—ತಡೆ, ಇದರಲ್ಲಿ ನಿನ್ನ ಹಣದ ಸುದ್ದಿಯು ತಾನೇ ತಾನಾಗಿ ಬಂದು ಹೋಗುವದು. ಆ ಅನಂತವಾದ ಅಂಬು ರಾಶಿಯಲ್ಲಿ ಮುಂದೆ ಮುಂದೆ ಸಾಗಲು ಎಷ್ಟೋ ದಿವಸಗಳ ತರುವಾಯದಲ್ಲಿ ಮಾನಾರದ ಆಖಾತವು ಹತ್ತುವದು. ಅಲ್ಲಿ ಸಮುದ್ರವು ಕಿರಿ ಅಗಲಿದೆ. ಇತ್ತ ಹಿಂದುಸ್ತಾನದ ದಂಡೆ. ಅತ್ತ ಸಿಂಹಳದ್ವೀಪದ ಧಡ. ಆ ಕಿರಿ ಅಗಲಿನ ಸಮುದ್ರದ ತಳದಲ್ಲಿ ಎಲ್ಲಿ ನೋಡಿದಡಲ್ಲಿ ಮುತ್ತಿನ ಹಾಸುಗೆ ಮೇಲ್ಭಾಗದಲ್ಲಿ ಮುತ್ತುಗಳ ಆಶೆಯಿಂದ ಲಕ್ಷಾವಧಿ ಜನರು ಲಕ್ಷಾವಧಿ ಹಡಗುಗಳನ್ನು ಕಟ್ಟಿಕೊಂಡು ಕುಳಿತಿರುವರು. ಕೆಳಭಾಗದಲ್ಲಿಯ ಮುತ್ತುಗಳು ಜನರ ಕೈಸೇರಿ ಆಭರಣಗಳಾಗಿ ಜನರ ಉತ್ತಮಾಂಗಗಳನ್ನು ಅಲಂಕರಿಸಬೇಕೆಂಬ ಉತ್ಸುಕತೆಯಿಂದ ಒಳಗಿಂದೊಳಗೇ ಕುಣಿದಾಡುತ್ತಿರುವವು. ಮೇಲಿದ್ದ ಮಾನವರು ಮುತ್ತುಗಳ ಈ ಉಲ್ಲಾಸವನ್ನು ಸಾರ್ಥಕಗೊಳಿಸುವದಕ್ಕಾಗಿ ಮಹಾ ಸಮುದ್ರದಲ್ಲಿ ಮುಳುಗಿ, ಆ ಮುತ್ತುಗಳನ್ನೆಲ್ಲ ಮುತ್ತಿ ಬಳಿದು ತಂದು ಹಡಗಗಳನ್ನು ತುಂಬುವರು. ಶೇಟಜಿ, ಆ ಮುತ್ತುಗಳ ಚಂದವನ್ನು ಎಷ್ಟೆಂತ ಹೇಳಲಿ? ಬೇರೆ ಬೇರೆ ಆಕಾರದ ಬೇರೆ ಬೇರೆ ಹೊಳಪಿನ ಆ ಮುತ್ತುಗಳ ರಾಶಿಯನ್ನು ನೋಡಿ ಕಣ್ಣು ತಿರುಗಿ ಹೋಗುವವು. ಹಸಿವು-ನೀರಡಿಕೆಗಳು ಹಿಂಗಿ ಹೋಗುವವು. ಜನರು ಮನೆಯನ್ನು ಮರೆದು ಸದಾ ಆ ಮುತ್ತುಗಳ ಹತ್ತಿರವೇ ವಾಸವಾಗಿರಬೇಕೆಂದು ಬಯಸುವರು!

ಕೈಲಾಸ ವಾಸಿ



ಶಂಕರ ಅಣ್ಣಾಜಿ ಕುಲಕರ್ಣಿ, ನೂಲವಿ.

ಮಾರ:—ಇರಬಹುದು. ಹಾಗೆಯೇ ನಿನ್ನ ಯಜಮಾನನೂ ಅಭಾವ ಪೂರ್ಣವಾದ ಈ ಮನೆಯನ್ನು ಮರೆದು ಅಲ್ಲಿಯೇ ಇದ್ದುಬಿಟ್ಟರೆ?

ಕೆಂಚ:—ಛೀ, ಶೇಟಜಿ! ಹೀಗೆ ಅಭದ್ರ ಮಾತುಗಳನ್ನಾಡಬೇಡ! ನನ್ನ ಧನಿಯರು ಅಂಥ ಲೋಭಿಗಳಲ್ಲ! ಅವರು ಸ್ವದೇಶಭಕ್ತಿಯಲ್ಲಿ ಕೊಂಚ ಶಿಥಿಲತೆಯನ್ನು ತೋರಿದರೂ ತೋರಬಹುದು; ಆದರೆ ಸ್ವಗೃಹ ಭಕ್ತಿಯಲ್ಲಿ ತಿಲಮಾತ್ರವೂ ಅನಾಸ್ಥೆಯನ್ನು ತೋರರು. ಆ ಸ್ವಗೃಹ ಭಕ್ತರು ಜಗತ್ತಿನಲ್ಲಿಯ ಎಲ್ಲ ಸಂಪತ್ತಿಯನ್ನು ಸುರಿವರೂ, ತಮ್ಮ ಈ ಮನೆಯನ್ನು ಮರೆದಿರರು. ಇರಲಿ. ಮುಂದಿನ ಮಾತನ್ನು ಹೇಳುವೆನು, ಕೇಳು. ನನ್ನ ಯಜಮಾನರು ಏಳು ಹಡಗಗಳನ್ನು ಮುತ್ತುಗಳಿಂದ ತುಂಬಿಕೊಂಡು ತಿರುಗಿ ಮುಂಬಯಿಗೆ ಬರುವರು. ಕೆಲವನ್ನು ಮುಂಬಯಿಯಲ್ಲಿ ಮಾರುವರು. ಹಲವನ್ನು ಇಲ್ಲಿಗೆ ಕಳುಹುವರು. ಉಳಿದವುಗಳನ್ನು ವಿಲಾಯತಿ, ಜರ್ಮನಿ, ಅಮೇರಿಕಾ ಮೊದಲಾದ ದೇಶಗಳಿಗೆ ಕಳುಹುವರು. ಈ ವ್ಯಾಪಾರದಲ್ಲಿ ನನ್ನ ಒಡೆಯರು ಕೋಟಿಗಟ್ಲೆ ರೂಪಾಯಿಗಳನ್ನು ಲಾಭ ಹೊಂದುವರು. ಆ ಬಳಿಕ ನಿನಗೆ ಹೀಗೆ ಅಡ್ಡಾಡುವ ಪ್ರಸಂಗ ಬಾರದು. ಒಂದೆರಡು ದಿನಗಳಲ್ಲಿ ನಿನ್ನ ಸಾಲವನ್ನೆಲ್ಲ ತೀರಿಸಿ ಬಿಡುವರು.

ಮಾರ:—ಹೀಗಿದ್ದರೆ, ಇನ್ನೇನು ಕೇಳುವದಿದೆ? ರೂಪಾಯಿಗಳು ನನ್ನ ಮನೆಗೆ ಬಂದೇ ಬಿಡುವವು!

ಕೆಂಚ:—ಬಂದೇ ಬಿಡುವವೆಂದು ಏಕೆ ಅನ್ನುತ್ತಿರುವೆ? ಬಂದು ಹೋಗಿವೆಯೆಂದು ತಿಳಿದುಕೊಳ್ಳು! ದಿನಾಲು ನೀವು ಉಂಟುಮಾಡುತ್ತಿರುವ ತೊಂದರೆಯ ಸಲುವಾಗಿ ನನ್ನ ಯಜಮಾನರು ತುಂಬಾ ಕೋಪಗೊಂಡಿದ್ದಾರೆ! ಒಂದು ಪೈ ಸಹ ಉಳಿಯದಂತೆ ಎಲ್ಲರ ಸಾಲವನ್ನೂ ತೀರಿಸಿ ಬಿಡುವೆವೆಂದು ಪಣ ತೊಟ್ಟಿದ್ದಾರೆ. ದಿನಾಲು ನಿಮ್ಮಂಥ ನಾಯಿಗಳು ಮನೆಗೆ ಬಂದು ಬಾಯಿಗೆ ಬಂದಂತೆ ಬೊಗಳಬೇಕು; ಇದನ್ನು ನಮ್ಮ ಯಜಮಾನರು ಸುಮ್ಮನೆ ತಡಕೊಂಡಿರಬೇಕು. ಈ ಕ್ರಮವು ಇನ್ನು ನಡೆಯದು; ಕೋಟ್ಯಾಧೀಶರಾಗುತ್ತಿರುವ ಅವರು, ನಿಮ್ಮೆಲ್ಲರ ಮೋರೆ ಕಿತ್ತುವಂ ಮೊಹರುಗಳನ್ನು ಬಿಸಾಟಿ ಬಿಡುವರು!

ಮಾರ:—ಒಳ್ಳೇ ಸರಿಯಾದ ಉತ್ತರ ಹೇಳಿದೆ! ನೀನು ನಿನ್ನ ಈ ಉತ್ತರದಲ್ಲಿ ಮುಂಬಯಿ, ಸಮುದ್ರ, ಹಡಗ, ಮಾನಾರ, ಮುತ್ತು ಮೊದಲಾದವುಗಳ ಜ್ಞಾನವನ್ನು ಮಾಡಿಕೊಟ್ಟಿಯಲ್ಲದೆ, ನನಗೆ ನಾಯಿಯೆಂಬ ಹಿರಿದಿನ ಬಿರುದನ್ನೂ ಕೊಟ್ಟು, ನಿನ್ನ ಬಾಯಿತಿಂಡಿಯನ್ನು ತೀರಿಸಿಕೊಂಡೆ! ನಾನು ನಿನ್ನ ಈ ಹಾಳು ಹರಟೆಯಿಂದ ಸುಮ್ಮನೆ ಹೋಗಲಾರೆನು. ಏನೆಂಬದಕ್ಕೂ ನಿರ್ಧಾರದ ಉತ್ತರವನ್ನು ಹೇಳು!

ಕೆಂಚ:—ಇನ್ನೂ ನಿನಗೆ ನಿರ್ಧಾರದ ಉತ್ತರವು ಬೇಕೆ? ಒಳ್ಳೇ ಗಟ್ಟಿಗನಪ್ಪಾ ನೀನು! ನಾನು ಹೇಳಿ ಹೇಳಿ ಬಾಯ ನೋಯಿಸಿಕೊಂಡೆನು! ಆದರೂ ನಿನಗೆ ಸಮಾಧಾನವಾಗಲಿಲ್ಲ! ಶೇಟಜಿ, ಹೀಗೆ ಚಿಂತಿಸುತ್ತ ನಿಂತೆಯೇಕೆ? ರೂಪಾಯಿಗಳನ್ನು ಏತರಲ್ಲಿ ಹಾಕಿ ಒಯ್ಯಲಿಯೆಂದು ಚಿಂತಿಸುತ್ತಿರುವೆಯಾ? ಚಿಂತೆ ಮಾಡಬೇಡ. ಮನೆಗೆ ಹೋಗು. ಅಂಗಡಿಯಲ್ಲಿಯ ಅತ್ಯುತ್ತಮವಾದ ಅರಿವೆಯನ್ನು ಹೊರದೆಗೆದು ಸಿಂಪಿಗನ ಕೈಯಲ್ಲಿ ಕೊಟ್ಟು ಚೀಲಗಳನ್ನು ಹೊಲಿಸು. ಆ ಚೀಲಗಳು ಸಿದ್ಧವಾಗುವಷ್ಟರಲ್ಲಿಯೆ ನನ್ನ ಯಜಮಾನರ ರೂಪಾಯಿಗಳು ಬಂದೇ ಬಿಡುವವು. ಹೋಗು. ಇನ್ನು ಇಲ್ಲಿ ನಿಲ್ಲಬೇಡ. ಬೇಗ ಹೋಗು. ಅದೋ, ಅಲ್ಲಿ ನೋಡು. ಐವರು ಬರುತ್ತಿರುವರು. ಅವರೂ ನಿನ್ನಂತೆಯೇ ಬಾಕಿಯ ವಸೂಲಿಗೆ ಹೊರಟಿರಬಹುದು. ಅವರೂ ಸಭ್ಯಗೃಹಸ್ಥರೇ. ಸರಿಯಾದ ಉತ್ತರವನ್ನು ಕೇಳಿಕೊಳ್ಳುವದಕ್ಕಾಗಿ ಇಲ್ಲಿಗೆ ಬರುತ್ತಿದ್ದಾರೆ. ನಾನು ಸವಿಮಾತುಗಳಿಂದ ಅವರನ್ನು ಸಮಾಧಾನಪಡಿಸಿ ತಿರುಗಿ ಕಳುಹಬೇಕಿದೆ. ಇಂತಹ ಸಮಯದಲ್ಲಿ ನೀನು ಇಲ್ಲಿ ಇದ್ದು ಗದ್ದಲವನ್ನು ಹೆಚ್ಚಿಸುವದು ವಿಹಿತವಲ್ಲ. ಬೇಗ ಹೊರಡು.

(ಮಾರವಾಡಿಯು ಮೋರೆಯೊಣಗಿಸಿಕೊಂಡು ಹೋಗುವನು. ಐವರು ಸೆಟ್ಟರು ಬರುವರು.)

೧ನೆಯವ:—ಇದೇ ಆ ಮನೆಯು.

೨ನೆಯವ:—ಸರಿಯಾಗಿ ನೋಡು. ತಪ್ಪಿ ಅನ್ಯರ ಮನೆಯನ್ನು ಹೊಕ್ಕರೆ ಅನರ್ಥಕ್ಕೊಳಗಾಗಬೇಕಾದೀತು!

೩ನೆಯವ:—ಇಲ್ಲಿ ಒಬ್ಬನು ನಿಂತಿರುವನು. ಹತ್ತಿರ ಹೋಗಿ ಕೇಳೋಣ ಬರ್ರಿ.

೪ನೆಯವ:—ಕೇಳುವದೇಕೆ? ಇದೇ ಆ ಮನೆಯು. ಗಟ್ಟಿಯಾಗಿ ಕೂಗಿರಿ. ಒಳಗಿದ್ದವರು ಹೊರಗೆ ಬರುವಂತೆ ಮಾಡಿರಿ.

೫ನೆಯವ:—ಬಂಡೇರಾಯರೇ....

(ಗಟ್ಟಿಯಾಗಿ ಕೂಗುವನು.)

೧ನೆಯವ:—ಬಂಡೇರಾಯರು ಮನೆಯಲ್ಲಿದ್ದಾರೆಯೆ?

೩ನೆಯವ:—ಬಂಡೇರಾಯರ ಮನೆಯು ಇದೇ ಅಲ್ಲವೆ?

ಕೆಂಚ:—ಹೀಗೆ ತಲೆಗೊಂದು ಮಾತನಾಡಿದರೆ ಉತ್ತರ ಕೊಡುವದು ಸಾಧ್ಯವಿಲ್ಲ! ನೀವು ಯಾರು?

೨ನೆಯವ:—ನಾವು ವ್ಯಾಪಾರಸ್ಥರು, ಬಾಕಿಯ ವಸೂಲಿಯ ಸಲು ವಾಗಿ ಬಂದಿದ್ದೇವೆ.

ಕೆಂಚ:—ನೀವೆಲ್ಲರೂ ವ್ಯಾಪಾರಸ್ಥರೆ?

೩ನೆಯವ: – ಹೌದು.

ಕೆಂಚ:—ಅಪ್ಪಗಳಿರಾ, ಇದೇನು? ಗುಂಪುಗಟ್ಟಿಕೊಂಡೇ ಬಂದಿರುವಿ ರಲ್ಲ! ನಿಮಗೇನು ಊಟದ ಔತಣವಿದ್ದಿತೆ? ಭೋಜನಶಾಲೆ ಇದಲ್ಲ! ನಾಟಕ ವನ್ನು ನೋಡ ಬಯಸಿ ಬಂದಿರುವಿರಾ? ನಾಟಕಗೃಹವಿದಲ್ಲ! ದೇಶಭಕ್ತರ ದೀರ್ಘ ವ್ಯಾಖ್ಯಾನಗಳನ್ನು ಕೇಳಬೇಕೆಂಬ ಕುತುಹಲದಿಂದ ಬಂದಿರುವಿರಾ? ಸಾರ್ವಜನಿಕ ಸಭಾಗೃಹವಿದಲ್ಲ! ಲಠ್ಠ-ಮುಠ್ಠ ಮೈಯವರಾದ ನೀವು ಹೀಗೆ ಗುಂಪುಗೂಡಿ ಇಲ್ಲಿಗೆ ಬರುವದಕ್ಕಿಂತ ರಿಕ್ರೂಟಿನಲ್ಲಿ ಸೇರಿದ್ದರೆ, ಯುರೋಪದ ಮಹಾ ಸಮರಕ್ಕೆ ಬಹಳ ಕಳೆಯೇರುತ್ತಿತ್ತಲ್ಲ!

೪ನೆಯವ:—ಬಂಡೇರಾವ ಬಾಯ್ಬುಳಿಯವರ ಬಾಯ್ಬಡಕ ಚಾಕರ ನಿವನು! ಎಲೋ ವಿದೂಷಕನಂತಿದ್ದ ಸೇವಕನೇ, ನಿನಗೆ ನನ್ನ ಗುರತು ಹತ್ತ ಲೊಲ್ಲದೆ? ಈಗ ತಿಂಗಳಿಂದಲೂ ಈ ಮನೆಗೆ ಎಡತಾಕುತ್ತಿದ್ದೇನೆ. ನಾಳೆ, ನಾಳೆ ಎಂದು ಹೇಳಿ, ದಿನಾಲು ನನ್ನನ್ನು ಹಿಂದಕ್ಕಟ್ಟುತ್ತ ಬಂದಿರುವೆ! ಇಂದು ನಾನು ನಿನ್ನ ಆ ನಿಶ್ಚಿತ ಉತ್ತರದಿಂದ ಹೋಗುವವನಲ್ಲ, ತಿಳಿಯಿತೇ? ನನ್ನ ಹಣವನ್ನು ಕೊಟ್ಟ ಹೊರತು, ನಾನಿಂದು ಈ ಮನೆ ಬಿಟ್ಟು ಕದಲತಕ್ಕವನಲ್ಲ. (ಕುಳಿತು ಬಿಡುವನು)

೨ನೆಯವ:—ನಾನೂ ನನ್ನ ಈ ಗೆಳೆಯನಂತೆಯೇ ಇರತಕ್ಕವನು.

(ಕುಳ್ಳಿರುವನು.)

೧ನೆಯವ:—ಸಾಲ ತರುವಾಗ ಎಂತಹ ಮಧುರ ಮಾತುಗಳು! ಬೇಡ ಬಂದಾಗ ಹೀಗೆ ಮೋರೆ ತಪ್ಪಿಸುವಿಕೆ! ಈ ಕಾಯಕವು ಇನ್ನು ನಡೆಯದು!

೩ನೆಯವ:--ಸುಮ್ಮನೆ ಕುಳ್ಳಿರುವದರಿಂದ ಏನು ಮಾಡಿದಂತಾಯಿತು? ಹೀಗೆ ಕುಳಿತುಕೊಂಡರೆ ನಮ್ಮನ್ನು ಕೇಳುವವರಾರು? ಕೂಗಿರಿ! ಬೊಬ್ಬೆ ಯಿಡಿರಿ! ತುಂಬಿದ ಓಣಿಯಲ್ಲಿಯ ಬಣಿವೆಗಳ ಗುಂಪಿಗೆ ಬೆಂಕಿಬಿದ್ದಾಗ ಜನರು ಹೇಗೆ ಚೀತ್ಕರಿಸುವರೋ, ಹಾಗೆ ಚೀತ್ಕಾರ ಮಾಡಿರಿ! (ಗಟ್ಟಿಯಾಗಿ) ರಾಯರೇ, ಬಂಡೇರಾಯರೇ, ಮನೆಬಿಟ್ಟು ಹೊರಗೆ ಬನ್ನಿರಿ! ಇಲ್ಲವೆ ಒಳಗಿನಿಂದ ಮನೆಯಲ್ಲಿಲ್ಲವೆಂದು ಹೇಳಿ ಬಿಡಿರಿ! ತಿಳಿಯಿತೆ? ಸುಮ್ಮನಿದ್ದರೆ ಕೇಳುವವನು ನಾನಲ್ಲ!

ಕೆಂಚ:—ನಾನು ಸಾಕ್ಷಾತ್ತಾಗಿ ಇಲ್ಲಿ ನಿಂತಿರುವಾಗ ನೀವು ಕೂಗಿ ಕೂಗಿ ಗಂಟಲು ಹರಿದುಕೊಳ್ಳುವದರಲ್ಲಿ ಪುರುಷಾರ್ಥವೇನು? ಯಾಕೆ ಒದರಿ ಒದರಿ ಸತ್ತು ಹೋಗುತ್ತಿರುವಿರಿ?

೨ನೆಯವ:—ನೀನು ಯಾರು?

ಕೆಂಚ:—ನಾನು ಸರ್ವಶಕ್ತನು! ಸರ್ವಾಧಿಕಾರಿಯು! ನಿಮ್ಮೆಲ್ಲರ ಜೀವನ-ಮರಣಗಳು ನನ್ನ ಕೈಯಲ್ಲಿವೆ! ತಿಳಿಯಿತೇ?

(ಒಬ್ಬನನ್ನೊಬ್ಬನು ವಿಸ್ಮಯದಿಂದ ನೋಡತೊಡಗುವನು.)

೧ನೆಯವ:--ಇವನು ಹೀಗೇಕೆ ಅನ್ನುತ್ತಿರುವನು? ನಮ್ಮ ಜೀವನವೇನು? ಮರಣವೇನು? ಇವನ ಕೈಯಲ್ಲಿ ಇರುವದೇನು? ಮೂರ್ಖನು. ಅಸಂಬದ್ಧವಾಗಿ ಬಡಬಡಿಸುತ್ತಿದ್ದಾನೆ!

೪ನೆಯವ:—ಇಷ್ಟಕ್ಕೇನೇ ತೀರಲಿಲ್ಲ! ಇನ್ನೂ ಕೇಳು! ಮಾತಿನ ಬಂಟನವನು! ಸಮಯ ಸಿಕ್ಕರೆ ಸಾಕು! ಮಾತಿನ ಮುಂಡಿಗೆಯನ್ನುರುಳಿಸಲು ಕೊಂಚವೂ ಹಿಂದೆಗೆಯನು!

ಕೆಂಚ:—ನೀವು ಇಂದು ನಿಮ್ಮ ಬಾಕಿಯನ್ನು ವಸೂಲ ಮಾಡಿಕೊಂಡೇ ಹೊರಡುವಿರಾ?

೧ನೆಯವ:— ಹೌದು.

೨ನೆಯವ:—ನಮ್ಮ ಹತ್ತಿರ ಹಣವನ್ನು ಬೇಡ ಬಂದಾಗ ನಿಮ್ಮ ರಾಯರು ಎಷ್ಟು ವಿನಯವನ್ನು ತೋರಿಸಿದರು! ಹೇಗೆ ಹಲವು ವಿಧವಾಗಿ ಹೇಳಿಕೊಂಡರು! ಈಗ ಅದೆಲ್ಲವನ್ನೂ ಮರೆದು, ನಿನ್ನಿಂದ ನಮ್ಮ ಅವಮಾನ ಮಾಡಿಸುತ್ತಿರುವರು! ಕಲಿಕಾಲವಲ್ಲದೆ ಮತ್ತೇನು?

೩ನೆಯವ:—ಬೇಡಬಂದಾಗ ಮಧುರವಚನಗಳ ಮಳೆಗರೆಯುವದೂ, ಕೊಡುವ ಪ್ರಸಂಗ ಬಂದಾಗ ಮೈದಪ್ಪಿಸುವದೂ ಈ ಕಲಿಯುಗದ ಧರ್ಮವಾಗಿ ಹೋಗಿದೆ!

ಕೆಂಚ:—ಇಷ್ಟೊಂದು ಬುದ್ಧಿವಂತರಾಗಿದ್ದ ನೀವು, ನನ್ನ ಯಜಮಾನರಿಗೆ ಮೊದಲು ಸಾಲಕೊಟ್ಟದ್ದೇಕೆ? ಆಗ ಈ ಬುದ್ಧಿವಂತಿಕೆ ಇರಲಿಲ್ಲವೇನು?

೧ನೆಯವ:—ಏನ ಮಾಡುವದಿದೆಯಪ್ಪಾ! ನಿಮ್ಮ ರಾಯರು ಮನಸ್ಸು ಕರಗುವಂತೆ ಬಹಳ ಹೇಳಿಕೊಂಡರು. ದಯೆ ಹುಟ್ಟಿತಾದ್ದರಿಂದ ಕೊಟ್ಟೆವು!

ಕೆಂಚ:—ನಿಮ್ಮ ಆ ದಯೆಗೆ ರಾಯರ ಹೇಳಿಕೆಯು ಕಾರಣವಾಗಿರದೆ, ರಾಯರಿಂದ ವಸೂಲ ಮಾಡಬೇಕೆಂದಿದ್ದ ಬಲವಾದ ಬಡ್ಡಿಯು ಕಾರಣವಾಗಿರಬೇಕೆಂದು ನಾನು ತಿಳಿದರೆ ತಪ್ಪಾದೀತೇನು?

೨ನೆಯವ:—ಈ ಚಾಕರನ ಸಂಗಡ ಮಾತನಾಡಿ ಗೆದಿಯುವದು ಕಠಿಣವದೆ. ಬರಿಯ ಮಾತಿನಿಂದ ಪ್ರಯೋಜನವೇನು? ಏನಪ್ಪಾ, ಈ ಹಾಳು ಹರಟೆಯನ್ನು ಕಟ್ಟಿಕೊಂಡು ಮಾಡುವದೇನು? ನಮ್ಮ ಬಾಕಿಯ ವಸೂಲಿಯ ಬಗ್ಗೆ ಸರಿಯಾಗಿ ಉತ್ತರ ಕೊಡು.

ಕೆಂಚ:—ಸಭ್ಯಗೃಹಸ್ಥರೆ, ನನಗೆ ಬೇಕಾದದ್ದೂ ಅಷ್ಟೇ. ದಿನಾಲು ನನ್ನ ಯಜಮಾನರ ಮನೆಗೆ ಬರುವ ನಿಮ್ಮಂತಹ ಜನರಿಗೆ ಎಣಿಕೆಯಿಲ್ಲ. ಅವರೆಲ್ಲರಗೂಡ ಮಾತನಾಡಿ ಮಾತನಾಡಿ ಬೇಸತ್ತು ಹೋಗಿದ್ದೇನೆ. ಹರಟೆಯೆಂದರೆ ಮೈಗೆ ಮುಳ್ಳೇ ಬರುವದು!

೪ನೆಯವ:—ಸರಿಯಾದ ಮಾತು! ಇನ್ನು ನಮಗೆ ಏನೆಂದು ಹೇಳುವೆ? ಹೇಳಿಬಿಡು!

ಕೆಂಚ:—ನನ್ನ ಯಜಮಾನರು ತಮ್ಮ ಬಳಿಯಲ್ಲಿ ಹಣವಿಲ್ಲದ್ದಕ್ಕಾಗಿ

ಯೇ ನಿಮ್ಮ ಹತ್ತಿರ ಸಾಲ ಮಾಡಿರುವರಷ್ಟೇ? ಅಂದಬಳಿಕ ನೀವು ನಮ್ಮ ಯಜಮಾನರ ಹತ್ತರ ಹಣವು ಸಂಚಿತವಾಗುವ ವರೆಗೆ ದಾರಿಯನ್ನು ಕಾಯಲೇಬೇಕು!

೧ನೆಯವ:—ಹೀಗಂದರೆ ಹೇಗಪ್ಪಾ? ಎಷ್ಟು ದಿವಸವೆಂದು ತಡೆಯ ಬೇಕು? ನಿಮ್ಮ ರಾಯರ ಹತ್ತಿರ ರೂಪಾಯಿಗಳು ಎಂದು ಸಂಗ್ರಹವಾಗ ಬೇಕು? ಅವರು ನಮ್ಮ ಸಾಲವನ್ನು ಯಾವಾಗ ತೀರಿಸಬೇಕು? ಆ ವರೆಗೆ ನಾವು ನಮ್ಮ ಸಾಲದ ಹಣವನ್ನು ಬೇಡಲಿಕ್ಕೆ ಅನಧಿಕಾರಿಗಳೇ?

ಕೆಂಚ:—ನಿಶ್ಚಯವಾಗಿಯೂ ಅಧಿಕಾರರಹಿತರು! ನಾನು ಹೇಳುವ ಮಾತನ್ನು ಸೆರಗಿಗೆ ಗಂಟುಹಾಕಿಟ್ಟುಕೊಳ್ಳಿರಿ! ನಮ್ಮ ರಾಯರ ಹತ್ತಿರ ಹಣ ವಿಲ್ಲದ ಸಮಯದಲ್ಲಿ ನೀವು ಅವರಿಂದ ಬಾಕಿಯನ್ನು ವಸೂಲಮಾಡಿಕೊಳ್ಳು ವಿರಾ? ಎಂದಿಗೂ ಆಗದ ಮಾತು! ತಮ್ಮ ಹತ್ತಿರ ಇಲ್ಲದ್ದನ್ನು ಅವರು ನಿಮಗೆ ಕೊಡುವದೆಂತು?

೪ನೆಯವ:—ನಾನು ಸಾಲವಾಗಿ ಹಣ ಕೊಟ್ಟವನಲ್ಲ. ಒಂದೆರಡು ದಿನಗಳಲ್ಲಿ ತಂದು ಕೊಡುವೆನೆಂದು ಕೈಗಡ ತಂದಿದ್ದಾರೆ. ಇಂದಿಗೆ ವರ್ಷದ ಮೇಲಾಗಿ ಹೋಯಿತು. ಎಡತಾಕಿ-ಎಡತಾಕಿ ಬೇಸತ್ತು ಹೋದೆನು!

ಕೆಂಚ:—ಇನ್ನು ಆ ಎಡತಾಕುವ ಗೊಂದಲಕ್ಕೆ ಹೋಗಬೇಡಿರಿ. ಸುಮ್ಮನೆ ಮನೆಯಲ್ಲಿ ಕುಳಿತು ಬಡ್ಡಿಯ ಲೆಕ್ಕ ಮಾಡಿಕೊಳ್ಳಿರಿ. ಬೆಳೆದ ಆ ಬಡ್ಡಿಯ ಲೆಕ್ಕವನ್ನು ನೋಡಿ, ನಿಮಗೆ ಸಂತೋಷವಾಗದಿರದು!

೧ನೆಯವ:--ಏನಪ್ಪಾ, ಮತ್ತೂ ಆ ಹುಡುಗಾಟವನ್ನೇ ಹಚ್ಚಿದೆಯಲ್ಲ? ಇನ್ನು ಚೇಷ್ಟೆಯು ಸಾಕು. ಕೆಲಸದ ಮಾತೆತ್ತಿ ಸಮಂಜಸವಾಗಿ ಮಾತ ನಾಡು!

ಕೆಂಚ:—ಕೆಲಸದ ಮಾತೇ? ಆಗಲಿ, ಅದನ್ನೇ ಹೇಳುವೆನು ಕೇಳಿರಿ. ಆದರೆ....ನನ್ನ ಮಾತಿನಲ್ಲಿ ನಿಮಗೆ ನಂಬಿಗೆ ಇದೆಯೆ? ನಂಬಿಗೆ ಇಲ್ಲದಿದ್ದರೆ ನನಗೂ ನಿಮಗೂ ಮಾತೇ ಬೇಡ! ಮಧ್ಯಾಹ್ನದ ಹೊತ್ತಾಯಿತು. ಜಳಕ ವಿಲ್ಲ-ಊಟವಿಲ್ಲ! ಹೊಟ್ಟೆಯಲ್ಲಿ ಹಸಿವೆಯ ಕಳವಳವು ಬಲವಾಗಿದೆ! ನಾನು ಹೊರಟೆನು!

(ಒಳಗೆ ಹೋಗುವವನಂತೆ ನಟಿಸುವನು.)

೧ನೆಯವ (ಕೆಂಚನನ್ನು ಹಿಡಿದೆಳೆದು):—ನನಗೆ ಏನೆಂಬದನ್ನು ಹೇಳಿ ಹೋಗು

೨ನೆಯವ:—ನಮ್ಮನ್ನು ಹೊರಗೆ ನಿಲ್ಲಿಸಿ ನೀನು ಊಟಕ್ಕೆ ಹೋಗುವದು ಸಂಭಾವಿತತನವೆ?

೩ನೆಯವ:—ನಿನ್ನ ಮೇಲೆ ನಮ್ಮ ವಿಶ್ವಾಸವಿದೆ.

ಕೆಂಚ:—ಹೀಗಿದ್ದರೆ, ಹೇಳುತ್ತೇನೆ ಕೇಳಿರಿ. ಒಳ್ಳೇ ಅನುಕೂಲವಾದ ಉತ್ತರ! ಕೇಳಿ ಪರಮಾನಂದ ಹೊಂದುವ ಮಾತು! ಹೇಳಲಿಯಾ?

೪ನೆಯವ:—ಆಗಲಿ, ಹೇಳಿಬಿಡು.

ಕೆಂಚ:—ನಮ್ಮ ರಾಯರ ಅಜ್ಜನ ಅತ್ತಿಗೆಯ ಮಗಳೊಬ್ಬಳಿದ್ದಾಳೆ. ಒಳ್ಳೇ ಶ್ರೀಮಂತಳು. ಮೂರಂತಸ್ತಿನ ಮನೆ. ಮನೆಯಲ್ಲಿ ಹೇರಳವಾದ ಹಣ. ಆದರೇನು? ಅವಳಿಗೆ ಮಕ್ಕಳಿಲ್ಲ. ಈಗಲವಳು ನಮ್ಮ ರಾಯರನ್ನು ದತ್ತಕ ತಕ್ಕೊಳ್ಳಬೇಕೆಂದು ಮಾಡಿದ್ದಾಳೆ. ಇನ್ನು ತುಸ ದಿವಸಗಳಲ್ಲಿ ಈ ಕೆಲಸವು ನಡೆದು ಹೋಗುವದು. ಆಗ್ಗೆ ನಮ್ಮ ರಾಯರನ್ನು ಹಿಡಿದವರಾರು? ಕೋಟ್ಯಾಧೀಶರಾದ ನಮ್ಮ ರಾಯರು ನಿಮ್ಮ ಮನೆಗೆ ಬರುವದೊತ್ತಟ್ಟಿಗಿರಲಿ, ನೀವಾಗಿ ಅವರ ಮನೆಗೆ ಬಂದರೂ, ನಿಮ್ಮನ್ನು ಕಣ್ಣೆತ್ತಿ ಸಹ ನೋಡರು! ತಿಳಿಯಿತೆ? ಆಗ ನಿಮ್ಮಂತಹ ಹಲವರು ಸಾವುಕಾರರು ಸಾಕಿದ ನಾಯಿಯು ಒಡೆಯನನ್ನು ಓಲೈಸುವಂತೆ, ನಮ್ಮ ರಾಯರ ಬೆನ್ನ ಹತ್ತುವರು! ನಮ್ಮ ರಾಯರು ಮೊದಲಿನ ಈ ಸ್ಥಿತಿಯನ್ನು ಮರೆಯದೆ ನಿಮ್ಮೆಲ್ಲರನ್ನು ಉಪೇಕ್ಷಿಸುತ್ತ ಲಕ್ಷ್ಮೀಪತಿಗಳಾಗಿ ಕಾಲ ಕಳೆಯುವರು!

೧ನೆಯವ:—ಅಂತೂ ನಮ್ಮ ಹಣವನ್ನು ನಾವು ನೀರಲ್ಲಿ ಚಲ್ಲಿ ಕೊಟ್ಟಿರುವೆವೆಂದಂತಾಯಿತು!

೨ನೆಯವ:—ಮತ್ತೇನು? ಈಗ ಬಡತನದಿಂದ ನಮಗೆ ಮೋರೆ ತೋರಿಸಲೊಲ್ಲರು; ಶ್ರೀಮಂತಿಕೆಯು ಬಂದ ಬಳಿಕ ಲಕ್ಷ್ಮಿಯ ಗರ್ವದಿಂದ ನಮ್ಮನ್ನು ನೋಡರು! ಅಂದಬಳಿಕ ನಮ್ಮ ಬಾಕಿಯು ವಸೂಲಾಗುವದೆಂತು?

ಕೆಂಚ:—ಮಹನೀಯರೆ, ಹೀಗೆ ತಿಳಕೊಂಡು ನಿರಾಶರಾಗಬೇಡಿರಿ!

ನಮ್ಮ ಧನಿಯರು ತಂದ ಸಾಲವನ್ನು ಮರೆಯುವವರಲ್ಲ! ಒಂದು ವೇಳೆ ಯಲ್ಲಿ—ಅವರ ಅಡಚಣಿಯ ಪ್ರಸಂಗದಲ್ಲಿ—ನೀವು ಮಾಡಿದ ಉಪಕಾರ ವನ್ನು ಅವರು ಎಂದೆಂದಿಗೂ ಸ್ಮರಿಸುವರು! ನಮ್ಮ ಯಜಮಾನರಿಗೆ ಶ್ರೀ-ಮಂತಿಕೆಯು ಬಂದರೆ, ಬಾಕಿಯು ಮುಳುಗಿ ಹೋದೀತೆಂಬ ನಿಮ್ಮ ಆಶಂಕೆ ಯು ತೀರ ಹುರುಳಿಲ್ಲದ್ದು! ಈಗ ನೀವು ಹೆಚ್ಚಿಗೆ ಮಾತ ಬಳಿಸಿ ಉಪಯೋಗ ವಿಲ್ಲ. ಸುಮ್ಮನೆ ಮನೆಗೆ ಹೋಗಿರಿ. ನಮ್ಮ ಧನಿಯರ ಶ್ರೀಮಂತಿಕೆಯ ಆಗಮನವನ್ನು ಕಾಯುತ್ತ ಕೊಂಡಿರ್ರಿ. ಅಂದು ನಿಮಗೆ ನಿಮ್ಮ ಅಸಲೂ, ಬಡ್ಡಿ ಯೂ ಕೂಡಿಯೇ ದೊರೆಯುವವಲ್ಲದೆ, ಸಾವಿರಾರು ರೂಪಾಯಿಯು ಸಾಲ ಬೇಕಾದರೂ ಸಿಗುವದರಲ್ಲಿ ಸಂದೇಹವಿಲ್ಲ!

ಶನೆಯವ:—ಮಹಾರಾಯಾ, ನಿನ್ನ ಆಶ್ವಾಸನ ವಾಣಿಯಿಂದ ನಮ್ಮ ಜೀವದಲ್ಲಿ ಜೀವ ಬಂತು—ನಮಗೆ ಪರಮಾನಂದವಾಯಿತು. ಇನ್ನು ನಾವು ಹೊರಟು ಹೋಗುವೆವು; ಆದರೆ ದೇವಾಲಯಕ್ಕೆ ಹೋದ ಬಳಿಕ ದೇವ ದರ್ಶನವಾಗಬೇಕಷ್ಟೇ? ಕೇವಲ ಪೂಜಾರಿಯ ಅನುಗ್ರಹ ಸಂಪಾದನೆಯಿಂದ ದೇವರನ್ನು ಮರೆತು ಹೋಗಲಿಕ್ಕಾದೀತೆ? ಒಮ್ಮೆ ದೇವರ ದರ್ಶನವನ್ನಷ್ಟು ಮಾಡಿಸಿ ಬಿಡು. ಕೃತಾರ್ಥರಾಗಿ ಹೊರಡುವೆವು!

ಕೆಂಚ:—ಓಹೋ! ಮಾತಿನ ಭರದಲ್ಲಿ ಮೂಲ ಸಂಗತಿಯನ್ನೇ ಮಾತಾಡ ಮರೆತಿದ್ದೆನು; ಈಗ ಹೇಳುತ್ತೇನೆ, ಕೇಳಿರಿ. ನನ್ನೊಡೆಯರು ದತ್ತಕ ಸಂಬಂಧದ ಸಕಲ ಸನ್ನಾಹಗಳನ್ನು ಮಾಡುವದಕ್ಕೆಂದು ಮುಂಬೈಗೆ ಹೋಗಿದ್ದಾರೆ. ಇನ್ನೆಂಟು ದಿವಸ ಬರುವಂತಿಲ್ಲ. ಅಂತೆಯೇ ನಾನು ಮನೆಯ ಮಾಲಕನಾಗಿ ನಿಮ್ಮೊಡನೆ ಇದುವರೆಗೆ ಜಬಾಬುದಾರಿಯಿಂದ ಮಾತಾಡಿದೆನು. ಧನಿಯರು ಮನೆಯಲ್ಲಿದ್ದರೆ, ನಾನು ಇಷ್ಟೊಂದು ಮಾತ ಬಳೆಸುತ್ತಿದ್ದೆನೆ? ಇನ್ನು ನೀವು ಯಾವ ಮಾತನ್ನೂ ಆಡಬೇಡಿರಿ! ಯಾವ ಸಂದೇಹವನ್ನೂ ಹಿಡಿಯದೆ, ಪರಮಾನಂದದಿಂದ ಗೃಹಾಭಿಮುಖರಾಗಿರಿ. ನಾನು ಸೂಚಿಸಿದ ಆ ಸುಸಂಧಿಯ ಮಾರ್ಗ ಪ್ರತೀಕ್ಷೆ ಮಾಡುತ್ತ ನಿಶ್ಚಿಂತ ರಾಗಿರ್ರಿ!

(ಶೆಟ್ಟರು ಮೋರೆಯೊಣಗಿಸಿಕೊಂಡು ಹೋಗುವರು. ಕೆಂಚನು ಅತ್ತಿತ್ತ ನೋಡುವನು.)

ಕೆಂಚ:—ಆ ಪದಗಗಳೆಲ್ಲವೂ ಅಡಗಿದಂತಾದವು! ಇನ್ನು ಹೊಟ್ಟೆಯ ಉದ್ಯೋಗಕ್ಕೆ ತೊಡಗಬೇಕು. (ಪುನಃ ಅತ್ತಿತ್ತ ನೋಡಿ) ಇನ್ನೂ ಮುಗಿದಿಲ್ಲ! ಅದೋ, ಅಲ್ಲಿ ಮೂವರು ಬರುತ್ತಿರುವರು. ಬಹುಶಃ ಅವರೂ ಬಾಕಿಯ ವಸೂಲಿಯ ಬಂಟರೇ ಇರಬಹುದು. ಇವರಿಗೆ ಏನು ಹೇಳಲಿ? ಇವರನ್ನು ಹೇಗೆ ಸಮಾಧಾನ ಪಡಿಸಿ ಕಳುಹಲಿ? ಹಸಿವೆಯಿಂದ ಹೊಟ್ಟೆಯು ತತ್ತರಿಸ ಹತ್ತಿದೆ! ಬಾಕಿಯ ವಸೂಲಿಯ ಈ ಭೂತಗಳ ತೊಂದರೆಯಾದರೋ ತಪ್ಪ ಲೊಲ್ಲದು. ಏನು ನನ್ನ ಅದೃಷ್ಟವಪ್ಪಾ!

(ಮೂವರು ಸಾವುಕಾರರು ಬರುವರು.)

೧ನೆಯವ:—ಏನಪ್ಪಾ, ಇಂದು ಏನೆಂದು ಹೇಳುವೆ?

೨ನೆಯವ:—ರಾಯರು ಮನೆಯಲ್ಲಿದ್ದಾರೆಯೇ?

ಕೆಂಚ:—ಸಭ್ಯಗೃಹಸ್ಥರೆ, ತಡಮಾಡಿದಿರಿ! ಇನ್ನು ನಿಮಗೆ ಉತ್ತರ ಕೊಡುವದಕ್ಕೆ ನನಗೆ ಅವಕಾಶವಿಲ್ಲದಾಗಿದೆ! ನಿಮಗೆ ವೇಳೆಯ ಬೆಲೆಯು ಗೊತ್ತಿರುವಂತೆ ಕಾಣಲಿಲ್ಲ! ಮಧ್ಯಾಹ್ನದ ಊಟದ ಸಮಯವೇನು, ಸಾಲ ಕೇಳಲಿಕ್ಕೆ ಬಂದಿರುವಿರೆಂದರೇನು? ನಾಳೆ ಬನ್ನಿರಿ. ನಿಮ್ಮನ್ನು ಸಮಾಧಾನ ಪಡಿಸಿ ಕಳುಹುವೆನು! ಮುಂಜಾವಿನಿಂದ ಇದುವರೆಗೆ ಎಷ್ಟೋ ಮಂದಿ ಬಂದು ಬಂದು ಹೋದರು. ನಾನವರೆಲ್ಲರನ್ನೂ ಸಂತೋಷಗೊಳಿಸಿ ಕಳು ಹಿದೆನು. ಅವರು ನಗನಗುತ್ತ ನಮ್ಮ ಮನೆಯಿಂದ ಹೊರಟು ಹೋದರು. ನೀವು ಆಗಲೇ ಬಂದಿದ್ದರೆ ಬಹಳ ಒಳಿತಾಗುತ್ತಿತ್ತು!

೩ನೆಯವ:— ಬರುವದಕ್ಕೆ ತುಸ ತಡವಾಯಿತಪ್ಪಾ! ಏನು ಮಾಡುವ ದಿದೆ? ನಮಗೆ ಹಲವು ಕೆಲಸಗಳು! ಹೇಗಾದರೂ ಮಾಡಿ, ನಮ್ಮನ್ನಷ್ಟು ಸಂತೋಷಗೊಳಿಸು!

ಕೆಂಚ:—ಇನ್ನು ಆಗದು! ನಾಳೆ ಬನ್ನಿರಿ!

೨ನೆಯವ:—ಹೀಗೆ ನಿಷ್ಠುರನಾಗಬೇಡಪ್ಪಾ! ಆಶೆಯ ಮಾತನ್ನಾದರೂ ಹೇಳು. ನಮ್ಮನ್ನು ನಿರಾಶಗೊಳಿಸಬೇಡ!

ಕೆಂಚ:—ಆಶೆಯ ವಾಣಿಯೆ? ಅದಕ್ಕೇನು ಕೊರತೆ? ಕೊಂಚವೂ ಚಿಂತಿಸ ಬೇಡಿರಿ! ನಿಮ್ಮ ರೂಪಾಯಿಗಳೆಲ್ಲವೂ ತಿಂಗಳೊಪ್ಪತ್ತಿನಲ್ಲಿಯೇ

ನಿಮ್ಮ ಕೈಸೇರುವವು. ಮನೆಗೆ ಹೋಗಿ ಸ್ವಸ್ಥರಾಗಿರ್ರಿ!

೩ನೆಯವ:—ಇದರಲ್ಲಿ ಹೊಸ ಮಾತೇನಿರುವದಪ್ಪಾ? ದಿನಾಲು ಹೀಗೆಯೇ ಹೇಳುತ್ತಿರುವೆ! ಕೇಳಿ ಕೇಳಿ ಸಾಕಾಗಿ ಹೋಗಿದೆ!

ಕೆಂಚ:—ಈಗ ನಾನು ಹೇಳಿದ್ದು ಹಳೆಯ ಮಾತೆ? ಮಹನೀಯರೆ, ಏನು ಮಾಡಲಿ? ಉಪಾಯವಿಲ್ಲದಾಗಿದೆ! ಇಂದು ಮುಂಜಾವಿನಿಂದ ಇದು ವರೆಗೆ ಹೊಸ ಹೊಸ ಮಾತುಗಳನ್ನು ಕಲ್ಪಿಸಿ ಕಲ್ಪಿಸಿ, ಹೇಳಿ ಹೇಳಿ ಬೇಜಾರ ಗೊಂಡಿರುವೆನು! ಇನ್ನು ನನ್ನ ಬಾಯಿಂದ ಹೊಸ ಮಾತುಗಳು ಹೊರಡುವ ಸಂಭವವೇ ಇಲ್ಲ! ನಿಮಗೆ ಹೊಸ ಕಲ್ಪನೆಗಳನ್ನು ಕೇಳುವ ಮನಸ್ಸಿದ್ದರೆ, ಎಂದಾದರೊಂದುದಿನ ಮುಂಜಾನೆ ನಸುಕಿನಲ್ಲಿಯೆ ಬಂದು ಬಿಡಿರಿ! ನಿಮಗೆ ಸಾಕಾಗುವಷ್ಟು ಹೊಸ ಮಾತುಗಳನ್ನು ಹೇಳಿ ನಿಮ್ಮನ್ನು ತೃಪ್ತಿಗೊಳಿಸು ವೆನು. ಇದು ನನ್ನ ಊಟದ ವೇಳೆ! ಹೆಚ್ಚಾಗಿ ಕಾಡಿ ನನಗೆ ತಾಪವನ್ನುಂಟು ಮಾಡಬೇಡಿರಿ! ದಯವಿಟ್ಟು ನಿಮ್ಮ ನಿಮ್ಮ ಮನೆಗಳಿಗೆ ಹೋಗಿರಿ!

೩ನೆಯವ:—ಮಹಾರಾಯಾ, ಈಗ ಆರು ತಿಂಗಳುಗಳಿಂದಲೂ ಎಡ ತಾಕುತ್ತಿದ್ದೇನೆ. ಒಂದು ಜೋಡು ಹೊಸ ಮೊಚ್ಚೆ ಹರಿದವು. ಇನ್ನೂ ನಿನಗೆ ದಯೆ ಬರಲೊಲ್ಲದೇ?

ಕೆಂಚ:—ಹರಿಯದೇನು? ನೀನು ಎಂಥ ದಡ್ಡನಪ್ಪಾ! ಸಾಲ ಕೊಟ್ಟ ಹಣವನ್ನು ವಸೂಲ ಮಾಡಿಕೊಳ್ಳಲಿಕ್ಕೆ ಹೋಗಬೇಕಾದರೆ ಹೊಸ ಮೊಚ್ಚೆ ಯನ್ನು ಮೆಟ್ಟಿದ್ದುಂಟೆ? ದೇವದರ್ಶನಕ್ಕೂ, ಶ್ರೀಮಂತರ ಮನೆಯ ಸಮಾ ರಂಭಕ್ಕೂ, ಕೀರ್ತನ-ಪುರಾಣಗಳ ಶ್ರವಣಕ್ಕೂ, ಬಾಕಿಯ ವಸೂಲಿಗೂ ಹೋಗುವ ಕಾಲಕ್ಕೆ ಹೊಸ ಜೋಡುಗಳನ್ನು ಮೆಟ್ಟಕೂಡದೆಂದು ಬುದ್ಧಿ ವಂತರು ಹೇಳುತ್ತಿರುವದನ್ನು ನೀನು ಕೇಳಿಲ್ಲವೆ? ಪಂಡಿತರ ಈ ಅನುಭ ವೋಕ್ತಿಯನ್ನು ಅಲ್ಲಗಳೆದು, ಯಾವನು ಡೌಲಿಗೆ ಹೋಗುವನೋ, ಅವನು ಪಶ್ಚಾತ್ತಾಪಪಡಬೇಕಾಗುವದು ಸಹಜವಾದದ್ದು!

೨ನೆಯವ:—ಒಳ್ಳೇ ಮೋಜಿನ ಮನುಷ್ಯನು! ಯಾವಾಗಲೂ ನಗೆ ಚಾಟಿಕೆ!........

ಕೆಂಚ:-ನಿಮ್ಮನ್ನು ನೋಡಿ ನನಗೊಂದು ಕತೆಯ ನೆನಪಾಗುತ್ತದೆ!....

೧ನೆಯವ:--ಬೇಡವಪ್ಪಾ ಬೇಡ! ನಮಗೆ ನಿನ್ನ ಆ ಕತೆಯನ್ನು ಕೇಳುವದು ಬೇಡ!........

ಕೆಂಚ:—ಸರಿಯಾಗಿ ಮಾತನಾಡಿದೆ! ನಿನ್ನ ಮಾತು ನನ್ನ ಮನಸ್ಸಿಗೆ ಪೂರಾ ಆನಂದವನ್ನುಂಟು ಮಾಡಿತು! ಯಾಕಂದರೆ, ನಿಮಗೆ ಕಥೆ ಹೇಳುತ್ತ ನಿಲ್ಲುವದಕ್ಕೆ ನನಗೆ ಅವಕಾಶವಿರಲಿಲ್ಲ! ನಿಮಗೆ ವೇಳೆಯ ಬೆಲೆ ಇರಲಿಕ್ಕಿಲ್ಲ! ಆದರೆ ನಾನು ನಿಮ್ಮಂತೆ ಅನಿಯಮಿತತನದಲ್ಲಿ ವೇಳೆಗಳೆಯುವಂತಿಲ್ಲ! ನೀವೇನು, ಹೊಟ್ಟೆತುಂಬಾ ಹೊಡೆದು ಬಂದಿರುವಿರಿ! ಬೇಕಾದಷ್ಟು ಹೊತ್ತು ಮಾತಾಡುತ್ತ ನಿಲ್ಲಬಹುದು! ನಾನು ಮುಂಜಾವಿನಿಂದ ಏನೂ ತಿಂದಿಲ್ಲ! ಹೊಟ್ಟೆ ಹಸಿದು ಹೈರಾಣವಾಗಿ ಹೋಗಿದೆ!

೧ನೆಯವ:—ಇವನೊಡನೆ ಇನ್ನು ಮಾತ ಬಳೆಸಿ ಉಪಯೋಗವಿಲ್ಲ! ನಡೆಯಿರಿ, ನಾವು ಈಗ ಹೋಗೋಣ. ಬೇರೆ ಮಾರ್ಗವನ್ನವಲಂಬಿಸಿ, ಈ ರಾಯರನ್ನು ಹಣ್ಣಿಗೆ ತರೋಣ!

೨ನೆಯವ:—ಹಾದಿಯಲ್ಲಿ ಸಿಗಲಿ! ನೋಡಿ ಬಿಡುವೆನು!

೩ನೆಯವ:—ಛೀ-ಛೀ! ಅಂಥ ಕೆಲಸಕ್ಕೆ ಹೋದದ್ದುಂಟೆ? ಇದು ಹುಬ್ಬಳ್ಳಿಯ ಪಟ್ಟಣ! ಅಲ್ಲಲ್ಲಿಗೆ ಪೋಲೀಸರು! ಸಾಲಗಾರರ ಮೇಲೆ ಸಾವುಕಾರರು ಕಾಯಿದೆಯಿಂದ ಜುಲುಮೆ ಮಾಡುವಂತಿಲ್ಲ!

೧ನೆಯವ:—ಆಗಲಿ, ಏನಾಗುವದೋ ನೋಡಿ ಬಿಡುವೆನು!

೨ನೆಯವ:—ಕಲಿಕಾಲದ ಮಹಿಮೆಯಲ್ಲದೆ ಮತ್ತೇನು? ಮನೆಯೊಳಗಿನ ದುಡ್ಡು ತೆಗೆದುಕೊಡಬೇಕು! ಹೀಗೆ ದಿನಾಲು ಎಡತಾಕಬೇಕು! ಅಂದದ್ದನ್ನು ಅನಿಸಿಕೊಳ್ಳಬೇಕು! ಇದೆಲ್ಲಿಯ ಧರ್ಮವಪ್ಪಾ? (ಹೋಗುವರು.)

ಕೆಂಚ:—ಮಧ್ಯಾಹ್ನದ ಹನ್ನೆರಡು ಹೊಡೆದು ಹೋಯಿತು! ಇನ್ನೂ ಜಳಕವಿಲ್ಲ! ಊಟವಿಲ್ಲ! ಹೊಟ್ಟೆಯಲ್ಲಿ ಕಾಗೆಗಳಿದ್ದಿವೆ! ಒಳಗೆ ಹೋಗಿ ಭೋಜನದ ಎತ್ತುಗಡೆ ಮಾಡುವೆನು! ಇನ್ನು ಬಾಕಿಯ ವಸೂಲಿಗಾಗಿ ಯಾರೂ ಬರಲಿಕ್ಕಿಲ್ಲ! ಬಂದರೂ ಹೊರಗೇ ಒದರುತ್ತಿರಲಿ! ಒದರಿ ಒದರಿ ಬೇಸತ್ತು ಹಿಂದಕ್ಕೆ ಹೋಗಲಿ! ನಾನು ಬಾಗಿಲಿಗೆ ಚಿಲಕವನ್ನು ಹಾಕಿಕೊಂಡು ಒಳಗೆ ಹೋಗಿ ಬಿಡುವೆನು. (ಹೋಗುವನು)

## ೨ನೆಯ ಪ್ರವೇಶ.

[ಬಂಡೇರಾಯನ ಮನೆ, ತಾರೆಯು ಬರುವಳು. ಹಿಂದೆ ಬಂಡೇರಾಯನಿರುವನು]

ಬಂಡೇರಾಯ:—ಪ್ರಿಯೆ, ನಿನ್ನ ದಾಸಾನುದಾಸನಾದ ನಾನು, ಬಹು ಪ್ರಕಾರ ಬೇಡಿಕೊಳ್ಳುವೆನು! ಕೋಪಗೊಳ್ಳದಿರು!

ತಾರೆ:—ಬಿಡಿರಿ! ನಿಮ್ಮ ಈ ಹೊಯ್ಮಾಲೆತನವು ನನಗೆ ಬೇಡ! ಒಂದು ದಿನವೆ? ಎರಡು ದಿನಗಳೇ? ದಿನಾಲೂ ಸಾವುಕಾರರ ಕಿಟಿ-ಕಿಟಿಯು! ಎಷ್ಟೆಂತ ತಡೆಯಬೇಕು? ಕೇಳಿ ಕೇಳಿ ಸಾಕಾಗಿ ಹೋಯಿತು!

ಬಂಡೇರಾಯ:—ಅಂತೆಯೇ ನಾನು ಇಷ್ಟೊಂದು ಹಣ್ಣಾಗಿ ನಿನ್ನನ್ನು ಬೇಡಿಕೊಳ್ಳುವುದು! ಸಾವುಕಾರರೇನೋ ಹೆರವರು. ಕೋಪಗೊಂಡು ಬಾಯಿಗೆ ಬಂದಂತೆ ಬೊಗಳುತ್ತಾರೆ. ಅವರ ಬೈಗಳನ್ನು ಹೇಗಾದರೂ ಮಾಡಿ ನಿಸ್ತರಿಸಿಕೊಳ್ಳಬಹುದು. ಈ ಸಮಯದಲ್ಲಿ ನನ್ನವಳಾದ ನೀನೂ ಹೀಗೆ ಕೋಪಗೊಂಡರೆ, ನನ್ನ ಗತಿಯೇನು? ಬಡವನಾದ ನಾನು ಇನ್ನು ಜೀವಿಸುವದೆಂತು?

ತಾರೆ:—ಕೇವಲ ಹುಡುಗಾಟಿಕೆ! ನಿರರ್ಥಕವಾದ ಹರಟೆ! ಮಾತಿನ ಮಲ್ಲರೆ ಸರಿ!

ಬಂಡೇರಾಯ:—ಮಲ್ಲನು ನಾನಲ್ಲ! ನಾನು ಬಂಡೇರಾಯ............

ತಾರೆ:—ಸಾಕುಮಾಡಿರಿನ್ನು ನಿಮ್ಮ ಚೇಷ್ಟೆಯನ್ನು! ನನಗೆ ಇನ್ನು ನಿಮ್ಮ ಈ ತರದ ಹುಡುಗಾಟಿಕೆಯ ಮಾತುಗಳು ಬೇಕಿಲ್ಲ! ಏನಾದರೊಂದು ಕೆಲಸವನ್ನು ನೋಡಿಕೊಳ್ಳಿರಿ. ಸಾವುಕಾರರ ಕಿಟಕಿಟಿಯಿಂದ ಪಾರಾಗುವ ಎತ್ತುಗಡೆ ಮಾಡಿರಿ.

ಬಂಡೇರಾಯ:—ಪ್ರಿಯೆ, ಧನೋನ್ಮತ್ತರ ಬಡಬಡಿಕೆಯು ನನಗೆ ಪ್ರಿಯವಾಗಿದೆಯೆಂದು ತಿಳಿದಿರುವೆಯಾ? ಯಾವ ಮನುಷ್ಯನಾದರೂ ತನ್ನ ಬೆನ್ನ ಹಿಂದೆ ಸಾವುಕಾರರ ತಗಾದೆಯಿರಬೇಕೆಂದು ಬುದ್ಧಿಪೂರ್ವಕ ಬಯಸಿದ್ದುಂಟೆ? ಏನು ಮಾಡುವದಿದೆ? ಅನಿರ್ವಾಹಕ್ಕಾಗಿ ಅನಿಸಿಕೊಂಡು ಸುಮ್ಮನಿರಬೇಕಾಗಿದೆ! ಸಾವುಕಾರರ ಪೀಡೆಯ ಪರಿಹಾರಕ್ಕೋಸುಗ ನಾನು ಇಂದಿನ

ವರೆಗೆ ಹಲವು ಕೆಲಸಗಳನ್ನು ಕೈಗೊಂಡೆನು; ಆದರೆ ನನ್ನ ದುರ್ದೈವದಿಂದ ಅವುಗಳಲ್ಲೊಂದೂ ಕೊನೆಗಾಣಲಿಲ್ಲ.

ತಾರೆ:—ಸುಡುಗಾಡ ಕೆಲಸ!

ಬಂಡೇರಾಯ:—ಪ್ರಿಯೆ, ಮಸಣದಲ್ಲಿ ಮಾಡಬೇಕಿದ್ದ ಹೋರೆಯನ್ನು ಆರಂಭಿಸಿದವನು ನಾನಲ್ಲ! ಈ ಪಟ್ಟಣದಲ್ಲಿದ್ದು ಮಾಡಬಹುದಾದ ಕೆಲಸವನ್ನೇ ಕೈಗೊಂಡೆನು. ಮೊದಲು ಈ ಪಟ್ಟಣದಲ್ಲಿ ವಿಶ್ರಾಂತಿಗೃಹದ ಆಟವನ್ನು ಹೂಡಿದೆನು; ಯಾಕಂದರೆ ಈ ಇಪ್ಪತ್ತನೆಯ ಶತಮಾನದಲ್ಲಿ ನಾಗರಿಕರು ಅವಲಂಬಿಸಬೇಕಿದ್ದ ಕಸಬುಗಳಲ್ಲಿ ಚಹಾದಂಗಡಿಯ ವ್ಯಾಪಾರವು ಶ್ರೇಷ್ಠತಮವೆಂದು ನನ್ನ ಭಾವನೆಯಾಗಿತ್ತು. ಈ ಹೋರೆಗೆ ಬಂಡವಲವೂ ಬಹಳ ಬೇಡ. ಶ್ರಮವೂ ಕಡಿಮೆ. ವಿಶ್ರಾಂತಿಗೃಹದ ಒಡೆಯನು ಬೇಗ ಶ್ರೀ-ಮಂತನಾಗುವ ಸಂಭವವು ಹೆಚ್ಚು. ಕೈಕೆಳಗಿನ ಚಾಕರರಿಗೆ ಕೊರತೆಯಿಲ್ಲ. ಓಲೈಸುವ ಗಿರಾಕಿಗಳಿಗೆ ಅಳತೆಯಿಲ್ಲ. ಮೇಲಾಗಿ ಪರಸ್ಥಳದಿಂದ ಬಂದು ಆಹಾರವಿಲ್ಲದೆ ಅಲೆಯುತ್ತಿರುವ ಅತಿಥಿಚಯಕೆ ಅನ್ನಗಾಣಿಸಿ, ಪರಮ ಪುಣ್ಯವಂತನಾಗಿ, ಪರಮಾರ್ಥ ಸಾಧಕನು ಆಗಬೇಕೆಂಬ ಭಾವನೆಗೂ ಸಾಕಷ್ಟು ಅವಕಾಶವಿದೆ. ಪ್ರಿಯೆ, ನಾನು ಇಷ್ಟೆಲ್ಲ ಸಂಗತಿಗಳ ವಿಚಾರ ಮಾಡಿ, ಚಹಾದಂಗಡಿಯ ಮಾಲಕನಾದೆನು. ಇದರಲ್ಲಿ ನನ್ನ ದೋಷವೇನು?

ತಾರೆ:—ಸರ್ವೋತ್ಕೃಷ್ಟವಾದ ಹೋರೆಯನ್ನೇ ಹುಡುಕಿಕೊಂಡಿದ್ದಿರೆನ್ನಬೇಕು!

ಬಂಡೇ:—ಪ್ರಿಯೆ, ಕೇಳುವದೇನು? ತಿಂಗಳೊಂದಕ್ಕೆ ಮುನ್ನೂರು ರೂಪಾಯಿಗಳನ್ನು ಬಾಡಿಗೆಯಾಗಿ ಗೊತ್ತುಮಾಡಿ ಅತ್ಯುತ್ತಮ ಮನೆಯನ್ನು ಹಿಡಿದೆನು. ನೂರಾರು ರೂಪಾಯಿಗಳನ್ನು ವೆಚ್ಚಮಾಡಿ ಬಗೆ ಬಗೆಯ ಚಿತ್ರಗಳನ್ನು ತಂದು ಮಂಡಿಸಿ, ಆ ಮನೆಯನ್ನು ಕನ್ನಡಿಯ ಮಹಲಿನಲ್ಲಿ ರೂಪಾಂತರಿಸಿದೆನು. ವಿಧವಿಧದ ವರ್ಣಗಳಿಂದೊಪ್ಪುತ್ತಿರುವ ಗೋಡೆಗಳನ್ನಲಂಕರಿಸಿದ್ದ ಆ ಚಿತ್ರಗಳು ನವನಾಗರಿಕತೆಯ ನವರುಚಿಗೆ ಅನುರೂಪವಾಗಿದ್ದು, ಕೂಡಲೆ ನೋಟಕರ ಮನವನ್ನೆಳೆದುಕೊಳ್ಳುತ್ತಿದ್ದುವು. ಅಲ್ಲಲ್ಲಿ ಮಂಡಿಸಿದ ಹೊಳೆಯುವ ಕುರ್ಚಿ ಬಾಕುಗಳೂ, ಸಂಗಮರವರೀ ಶಿಲೆಯ ಮೇಜುಗಳೂ

ಆಗತ ಜನರ ಸ್ವಾಗತಕ್ಕೋಸುಗ ಸಿದ್ಧವಾಗಿದ್ದವು. ಮುಂಭಾಗದಲ್ಲಿದ್ದ ಫೋನೋ ಸುಸ್ವರದೊಂದಿಗೆ ಹಾಡಿ ಹಾಡಿ, ಬೀದಿಯಲ್ಲಿ ಅಲೆದಾಡುವ ಜನರಲ್ಲಿ ಲೋಭವನ್ನು ಹುಟ್ಟಿಸುತಲಿತ್ತು. ಮಾಲಕನಾದ ನಾನು ಫೋನೋದ ಹತ್ತಿರ ದೊಡ್ಡ ಆಫೀಸರನಂತೆ ಕಚೇರಿ ಮಾಡಿಕೊಂಡು ಕುಳಿತು, ಭಾಂಡಾರದ ರಕ್ಷಕನಾಗಿರುತ್ತಿದ್ದೆನು. ಆ ಸಮಯದಲ್ಲಿ ಅಕಸ್ಮಾತ್ತಾಗಿ ಬಂದ ಗಾವಿಲನೊಬ್ಬನು ನನ್ನ ಆ ಗೃಹವನ್ನು ನೋಡಿ ಬೆರಗುಗೊಂಡು ಬಾಯ್ಬಿಟ್ಟು ಆssss ಯೆಂದು ಬಾಯ್ದೆರೆದು ಮೈಮರೆದು ನಿಂತುಕೊಳ್ಳುತ್ತಿರುವದನ್ನು ನೋಡಿದ ನನಗೆ ಆನಂದವಾಗದಿರುತ್ತಿರಲಿಲ್ಲ. ಪ್ರಿಯೆ! ಆ ಸೌಭಾಗ್ಯವನ್ನು ಎಷ್ಟು ವರ್ಣಿಸಿದರೂ ತೀರದು! ಹೆಚ್ಚಿಗೆ ಹೇಳಲೇನು? ಅಮರಾವತಿಯ ಒಂದು ಗೃಹವನ್ನು ನಾನು ಮಾನವರ ಪ್ರದರ್ಶನಕ್ಕೋಸುಗ ಈ ಭೂಲೋಕದಲ್ಲಿ ಮಂಡಿಸಿದ್ದೆನು!

ತಾರೆ:—ಒಳ್ಳೇ ಬುದ್ಧಿವಂತರು! ಬಹು ಶಕ್ತಿವಂತರು!

ಬಂಡೇರಾಯ:—ನನ್ನ ಹೊರತು ಇತರರಿಗೆ ಹೀಗೆ ಮಾಡಲು ಸಾಧ್ಯವಿತ್ತೆ? ನನ್ನ ಅಂಗಡಿಯಾಗುತ್ತಲೆ, ನಗರದೊಳಗಿನ ಹಳೆ ಅಂಗಡಿಗಳೆಲ್ಲ ಕೆಳಮೋರೆ ಮಾಡಿದುವು! ಆ ಅಂಗಡಿಗಳಲ್ಲಿ ನೊಣ ಹೊಡೆಯಲಿಕ್ಕೆ ಜನರು ದಿಕ್ಕಿಲ್ಲದಾಯಿತು! ನನ್ನ ಅಂಗಡಿಯು ಒಳ್ಳೇ ಭರಭರಾಟಿಯಿಂದ ನಡೆಯಿತು!

ತಾರೆ:—ನಮ್ಮ ಭಾರತಭೂಮಿಯ ಮುನ್ನಿನ ವೈಭವದಂತೆ, ನಿಮ್ಮ ಆ ಕನ್ನಡಿಯ ಮಹಾಲಿನಿಂದ ಹೊನ್ನಿನ ಹೊಗೆ ಹೊರಟಿರಬಹುದು!

ಬಂಡೇರಾಯ:—ಇಲ್ಲ! ಹೀಗಾಗಲಿಲ್ಲ! ಹೀಗಾಗದಿದ್ದುದರ ಪರಿಣಾಮವನ್ನೇ ಇಂದು ನಾವೆಲ್ಲರೂ ಅನುಭವಿಸುತ್ತಿದ್ದೇವೆ! ಪ್ರಿಯೆ, ಯಾವುದೇ ಕೆಲಸವಾಗಲಿ, ಜಯಶಾಲಿಯಾಗಿ ಅರ್ಥವನ್ನೂ ಗೌರವವನ್ನೂ ಅರ್ಜಿಸಬೇಕಾದರೆ, ದೈವಬಲವು ಬೇಕೇ ಬೇಕು! ದೈವವು ವಿಮುಖವಾಗಿದ್ದಾಗ ಮನುಷ್ಯನ ಪ್ರಯತ್ನಗಳೆಲ್ಲ ಹೊಳೆಯಲ್ಲಿ ಹುಣಸಿಯ ಹಣ್ಣು ತೊಳೆದಂತೆ ನಿರರ್ಥಕವಾಗಿ ಹೋಗುವವು! ತಾರೆ:—ಕೈಲಾಗದವರ ಮಾತಿದು!

ಬಂಡೇರಾಯ.—ಪ್ರಿಯೆ, ಹೀಗೆನ್ನದಿರು! ನಾನು ಯಾವ ತಪ್ಪನ್ನೂ ಮಾಡಿದವನಲ್ಲ!

ತಾರೆ:—ರೋಗ-ಶೋಕಾದಿಗಳು ಸ್ವದೋಷಗಳ ಫಲಗಳೆಂದು ಬುದ್ಧಿವಂತರು ಹೇಳಿದ್ದನ್ನು ನೀವು ಕೇಳಿಲ್ಲವೆ?

ಬಂಡೇರಾಯ:—ಹೀಗಿದ್ದರೆ, ನಾನು ಯಾವ ದೋಷವನ್ನಾಚರಿಸಿದೆನೆಂಬದನ್ನು ನೀನೇ ಹೇಳಿಕೊಡು. ಚಹಾದಂಗಡಿಯ ನನ್ನ ಆ ವ್ಯಾಪಾರದಲ್ಲಿ ನಾನು ಕೇವಲ ಬಾಹ್ಯ ಆಡಂಬರಕ್ಕೊಳಗಾಗಿ ಅಂತರ್ವ್ಯವಸ್ಥೆಯ ಕಡೆಗೆ ದುರ್ಲಕ್ಷ್ಯಿಸಿದೆನೆಂದಲ್ಲ; ಹೊರನೋಟವನ್ನು ಪ್ರೇಕ್ಷಣೀಯವಾಗಿ ಮಾಡಿದಂತೆ, ಅಂಗಡಿಯೊಳಗಿನ ಸಾಮಾನುಗಳೆಲ್ಲ ರುಚಿಕರವಾಗಿರುವಂತೆ ಮಾಡಿಸಿದ್ದೆನು. ಒಟ್ಟಿನ ಮೇಲೆ ಒಂದೇ ಒಂದು ಮಾತಿನಲ್ಲಿ ಹೇಳುವದಾದರೆ, ಅಂಗಡಿಯ ಉನ್ನತಿಯ ವಿಷಯದಲ್ಲಿ ನಾನು ಕೊಂಚವೂ ಆಲಸ್ಯವನ್ನು ತೋರ್ಪಡಿಸಿದವನಲ್ಲ! ಆದರೆ ಈ ಪಟ್ಟಣ ವಾಸಿಗಳು ಗುಣಗ್ರಾಹಿಗಳಲ್ಲ! ಸ್ವದೇಶದ ಧಂದೆಗಳಿಗೆ ಉತ್ತೇಜನ ಕೊಡುವವರಲ್ಲ! ಎಲ್ಲರೂ ಬಣವಿಯ ಸುಟ್ಟು, ಅರಳು ಮುಕ್ಕುವವರೆ! ಸ್ವಂತದ ಮೂಗು ಕೊಯ್ದುಕೊಂಡು ಹೆರವರಿಗೆ ಅಪಶಕುನ ಮಾಡಬಯಿಸುವವರೆ!

ತಾರೆ:—ಅಂದರೆ?

ಬಂಡೇರಾಯ:—ಅದನ್ನೇ ಹೇಳುವೆನು ಕೇಳು: ನಮ್ಮಲ್ಲಿ ಕ್ರಮಶಃ ಹೆಚ್ಚುತ್ತಲಿರುವ ದಾರಿದ್ರ್ಯವೂ, ಪರಿವರ್ತಿತವಾಗುತ್ತಿರುವ ರುಚಿಭಿನ್ನತೆಯೂ ಇದಕ್ಕೆ ಕಾರಣಗಳಾಗಿವೆ. ನಾನು ಹೂಡಿದ ದೊಡ್ಡ ಆಟದಿಂದ ಗಿರಾಕಿಗಳ ಸಂಖ್ಯೆಯು ಹೆಚ್ಚಿತಾದರೂ, ವ್ಯಾಪಾರದ ಬೆಲೆಯು ಬೆಳೆಯಲಿಲ್ಲ. ಯಾವನು ಬಂದರೂ 'ಒಂದು ಕಾರ, ಸಿಂಗಲ್‌ಕಪ್ಪು ಚಹಾ'ದವನೆ! ಅಲ್ಲದೆ ನಾನು ಮಾಡಿದ ಉತ್ತಮೋತ್ತಮ ಪಕ್ವಾನ್ನಗಳನ್ನು ಒಂದೆರಡು ಸೇರಾದರೂ ಕೊಂಡು ರುಚಿ ನೋಡಿ ಉತ್ತೇಜನ ಕೊಡುವ ನಬಾಬನು ಒಬ್ಬನೂ ಹೊರಡಲಿಲ್ಲ! ಇದರಿಂದ ನಾನು ಮಾಡಿಸಿಟ್ಟ ಆ ಪಕ್ವಾನ್ನಗಳು ನಿರರ್ಥಕವಾಗಿ ಕೆಟ್ಟು ಹೋಗುವ ಪ್ರಸಂಗ ಬಂತು!

ತಾರೆ:—ಅಂತೆಯೇ ನೀವು ಅವುಗಳನ್ನು ನಿಮ್ಮ ಸ್ನೇಹಿತರಲ್ಲಿ ಹಂಚಿ, ಅವರ ಸ್ತುತಿಗೆ ಪಾತ್ರರಾದಿರಿ!

ಬಂಡೇರಾಯ:—ಪ್ರಿಯೆ, ಮತ್ತೇನು ಮಾಡಬೇಕಿತ್ತು? ·೧೮೧೮

ಹೇಳು! ಉತ್ತಮವಾದ ವಸ್ತುಗಳನ್ನು ವ್ಯರ್ಥವಾಗಿ ವ್ಯಯಮಾಡುವದಕ್ಕಿಂತ ಸ್ನೇಹಿತರಿಗೆ ದಾನ ಮಾಡುವದು ವಿಹಿತವಲ್ಲವೆ? ಇದರಿಂದ ಆ ನನ್ನ ಗೆಳೆಯರು ತುಂಬಾ ಸಂತುಷ್ಟರಾಗಲಿಲ್ಲವೆ?

ತಾರೆ:—ಅವರು ಸಂತುಷ್ಟರಾಗುವದರೊಳಗೆ ನೀವು ದಿವಾಳಿಖೋರರಾದಿರಿ!

ಬಂಡೇರಾಯ:—ನಿಜ! ಕಾರ್ಯ ಮಾಡುವದು ನಮ್ಮ ಕೈಯೊಳಗಿನದು. ಯಶವನ್ನು ಕೊಡುವವನು ದೇವರು! ನಾನು ಚಹಾದಂಗಡಿಯ ಉದ್ಯೋಗದಲ್ಲಿ ಕೃತಕಾರ್ಯನಾಗಬಾರದೆಂಬದು ದೇವರ ಸಂಕೇತವಿರುವಾಗ, ನಾನು ಏನು ಮಾಡಿದರೇನು? ಎಲ್ಲವೂ ವ್ಯರ್ಥವಾಗಿ ಹೋಯಿತು!

ತಾರೆ:—ಇದರಲ್ಲಿ ನಿಮ್ಮ ತಪ್ಪು ಏನೂ ಇದ್ದಿಲ್ಲವೆಂದೇ ನಿಮ್ಮ ಭಾವನೆಯೇನು?

ಬಂಡೇರಾಯ:—ನಾನು ತಪ್ಪು ಮಾಡಿದೆನೇ? ಎಂದಿಗೂ ಇಲ್ಲ! ನನ್ನಿಂದ ಕೊಂಚವೂ ತಪ್ಪಾಗಲಿಲ್ಲ!

ತಾರೆ:—ಯಾವದೇ ವ್ಯವಸಾಯದಲ್ಲಿ ಆರಂಭದಲ್ಲಿ ಮಿಗಿಲಾದ ಆಡಂಬರವನ್ನು ಹೂಡುವದು ಪರಿಣಾಮದಲ್ಲಿ ಅಹಿತಕರವೆಂದು ನಿಮಗೆ ಈಗಲೂ ಅನಿಸುವದಿಲ್ಲವೆ?

ಬಂಡೇರಾಯ:--ಹಾಗೆ ಆಡಂಬರವನ್ನು ಹೂಡದಿದ್ದರೆ, ನನ್ನ ಅಂಗಡಿಗೆ ಗಿರಾಕಿಗಳೇ ಬರುತ್ತಿದ್ದಿಲ್ಲ!

ತಾರೆ:—ಬರದಿದ್ದರೂ, ನಿಮಗೆ ಇಷ್ಟೊಂದು ಹಾನಿತಟ್ಟುವ ಸಂಭವವಿದ್ದಿಲ್ಲ! ಮೇಲಾಗಿ ಅದು ಗೌರವದ ಹೋರೆಯಲ್ಲ. ಅಂಥ ಉದ್ಯೋಗವನ್ನು ನೀವು ಕೈಕೊಳ್ಳತಕ್ಕದ್ದೇ ಅಲ್ಲ!

ಬಂಡೇರಾಯ:—ಏನೇ ಆಗಲಿ, ನಾನು ಅದನ್ನು ಬಹು ದಿವಸ ಮಾಡುವ ಪ್ರಸಂಗವೇ ಬರಲಿಲ್ಲ! ನಾಲ್ಕಾರು ತಿಂಗಳುಗಳಲ್ಲಿಯೇ ವೆಚ್ಚವು ಮೈ ಮೇಲೆ ಬಂದದ್ದರಿಂದ ನಾನು ಆ ಅಂಗಡಿಯನ್ನು ಮುರಿದು ಬಿಟ್ಟೆನು! ಬಳಿಕ ಮೋಟಾರದ ಧಂದೆಯನ್ನು ಕೈಕೊಂಡು ಧಾರವಾಡ-ಹುಬ್ಬಳ್ಳಿಯ ಸಾರಿಗೆಯನ್ನಿಟ್ಟೆನು ಇದರಲ್ಲಿ ಮೊದಲು ಮೊದಲು ಲಾಭವಾಗುವಂತೆ ಕಂಡಿ

ತಾದರೂ, ಮುಂದೆ ಆ ಲಾಭವು ಉಳಿಯಲಿಲ್ಲ. ಯಾಕಂದರೆ ನಮ್ಮಲ್ಲಿ ಹೊಸ ಹೊಸ ಹೋರೆಗಳನ್ನು ಹುಡುಕುವವರಿಲ್ಲ. ಒಬ್ಬನು ಒಂದು ಹೋರೆಯನ್ನವಲಂಬಿಸಿ ಲಾಭ ಹೊಂದುತ್ತಿರುವುದನ್ನು ನೋಡಿದ ಕೂಡಲೆ, ಹತ್ತಿಪ್ಪತ್ತು ಜನರು ಅದೇ ಧಂದೆಗೆ ಮುಕುರುವರು. ಇದರಿಂದ ಆಗತಕ್ಕಷ್ಟು ಲಾಭವಾಗುವದಿಲ್ಲವಿಷ್ಟೇ ಅಲ್ಲ; ಜನರ ಆಚಿನಗಿಂತಲೂ ವಸ್ತುಗಳ ಪೂರೈಕೆಯು ಹೆಚ್ಚಾಗಿ ಆಗುತ್ತಲೆ ಹಾನಿಗೊಳಗಾಗಬೇಕಾಗುವದು. ಹೀಗಾಗಿ ಮೋಟಾರ ಸಾರಿಗೆಯ ಹೋರೆಯಲ್ಲೂ ನನಗೆ ಹಾನಿಯಲ್ಲದೆ ಲಾಭವಾಗಲಿಲ್ಲ! ಈ ಎರಡು ಉದ್ಯೋಗಗಳಲ್ಲಿ ನಾನು ನನ್ನ ಪೂರ್ವ ಪುರುಷರು ಗಳಿಸಿಟ್ಟ ಹಣವನ್ನೆಲ್ಲ ಕಳಕೊಂಡು ಬರಿಗೈಯವನಾದೆನು! ಅಂದಿನ ವರೆಗೆ ರಾಜನಂತೆ ಮೆರೆದಿದ್ದ ನನಗೆ, ಅಂದಿನಿಂದ ಇಂದಿನ ವರೆಗೆ ಹಣದ ತೊಂದರೆಯೇ ತಪ್ಪಲೊಲ್ಲದು!

ತಾರೆ:—ಇನ್ನು ಆ ವ್ಯಾಪಾರದ ಉಸಾಬರಿಯನ್ನು ಬಿಟ್ಟು ಬಿಡಿರಿ! ಬ್ರಾಹ್ಮಣರಿಗೆ ವ್ಯವಸಾಯ-ಉದ್ದಿಮೆಗಳು ಬಗೆಹರಿಯವು! ಯಾವುದೊಂದು ಸರಕಾರದ ನೌಕರಿಯ ನೋಡಿಕೊಳ್ಳಿರಿ.

ಬಂಡೇರಾಯ:—ಈ ದಿವಸಗಳಲ್ಲಿ ನಮ್ಮಂಥವರಿಗೆ ಸರಕಾರದ ನೌಕರಿಯೆ? ಬಿ. ಎ, ಎಮ್. ಎ. ಮೊದಲಾದ ಪದವಿಗಳನ್ನು ಪಡೆದ ಮಹಾಪಂಡಿತರು 'ನೌಕರಿ ನೌಕರಿ' ಎಂದರಚಿಕೊಂಡು ಕೀಸರಿಟ್ಟರೂ ಹೊಂದದೆ ಪೇಚಾಡುತ್ತಿರುವಾಗ, ಯಾವ ಪರೀಕ್ಷೆಯನ್ನೂ ಪಾಸಾಗದ ನನ್ನನ್ನು ಕೇಳುವವರಾರು? ಈಗ ನೌಕರಿಯ ಬಝಾರವು ಬಹಳ ಮಂದವಿದೆ. ಅಲ್ಲಿ ನನ್ನಂಥ ಬ್ರಾಹ್ಮಣನು ಮೋರೆ ತೋರಿಸಲಿಕ್ಕೂ ಅಯೋಗ್ಯನು!

ತಾರೆ:—ಹೀಗಿದ್ದರೆ ಏನು ಮಾಡಬೇಕು? ನನಗಾದರೋ ದಿನಾಲು ಸಾವುಕಾರರ ಮನಸ್ವೀ ಮಾತುಗಳನ್ನು ಕೇಳಿ, ತಲೆ ಚಿಟ್ಟು ಹಿಡಿದು ಹೋಗಿದೆ! ಇನ್ನು ನನ್ನಿಂದ ಕೇಳುವದಕ್ಕಾಗದು!

ಬಂಡೇರಾಯ:—ಪ್ರಿಯೆ, ಹೀಗೆ ಬೇಜಾರಗೊಂಡರೆ, ಬಾಳುವೆಯೇ ನಡೆಯದು! ಅವರಾಡುವ ಮಾತುಗಳೇನು ನಮ್ಮ ಮೈಗೆ ತಾಗುತ್ತಿರುವೆಯ? ನಮಗೇನಾದರೂ ಧಕ್ಕೆಯಾಗುವದೇ? ನಾವವುಗಳನ್ನು ಒಂದು ಕಿವಿಯಿಂದ

ಕೇಳಿ, ಮತ್ತೊಂದು ಕಿವಿಯಿಂದ ಹೊರದೂಡಿ ಬಿಡಬೇಕು! ಅವುಗಳ ಬಗ್ಗೆ ಸ್ವಲ್ಪ ಸಹ ಯೋಚಿಸಕೂಡದು! ಆನೆಯು ಆಧ್ಯತೆಯಿಂದ ಆಗವಿಸುತ್ತಿರುವಾಗ, ಶ್ವಾನಗಳು ಬೊಗಳುವವು; ಆದರೆ ಆ ಗಜರಾಜನು ನಾಯಿಗಳ ಬೊಗಳುವಿಕೆಯನ್ನು ಲಕ್ಷಿಸುವನೆ? ಹಾಗೆಯೇ ನಾವೂ ಆ ಚಿಲ್ಲರ ಜನರ ಕೂಗುವಿಕೆಯ ಕಡೆಗೆ ಮನಸ್ಸು ಹಾಕಕೂಡದು! ನಾವು ಎಂದಿನಂತೆ ದೊಡ್ಡಿಸ್ತನದಲ್ಲಿಯೇ ಕಾಲ ಕಳೆಯೋಣ. ಆ ಹೊಟ್ಟೆಯುರುಕರು ದಿನಾಲು ಬಂದು ಬಾಯಿಗೆ ಬಂದಂತೆ ಬೊಗಳಿ ಹೋಗಲಿ ಆ ದಾಂಭಿಕರ ವಾಗ್ಬಾಣಗಳನ್ನು ನಿತ್ತರಿಸಿಕೊಳ್ಳಲಿಕ್ಕೆ ಕೆಂಚನು ಸಮರ್ಥನಿದ್ದಾನೆ. ನಾವು ಅವನನ್ನು ಮುಂದೆ ಮಾಡಿ, ಮರೆಯಲ್ಲಿ ಮೋಜು ನೋಡುತ್ತ ನಿಂತರಾಯಿತು. ಅವನು ಬೇಸತ್ತನೆಂದರೆ, ಬೇರೊಂದು ಉಪಾಯವನ್ನು ಹುಡುಕಲಿಕ್ಕೆ ಬಂದೀತು. ಅದು ವರೆಗೆ ಯಾವ ವಿಚಾರವನ್ನೂ ಮಾಡದೆ, ನಿಶ್ಚಿಂತರಾಗಿರೋಣ.

ತಾರೆ:—ಪ್ರಪಂಚವು ನಡೆಯಬೇಕಷ್ಟೆ? ಒಂದು ಸಾಮಾನಿನ ಕೊರತೆಯಾದರೂ ನಡೆಯದು!

ಬಂಡೇರಾಯ:—ಅದು ಈ ವರೆಗೆ ಸಡಗರದಿಂದಲೆ ನಡೆದಿದೆಯಷ್ಟೇ? ಇನ್ನು ಮುಂದೆಯೂ ಹೀಗೆಯೇ ಸಾಗುವದು!

ತಾರೆ:—ನಿಮ್ಮ ಈ ಸ್ಥಿತಿಯನ್ನು ತಿಳಿದು, ಇನ್ನು ನಿಮಗೆ ಸಾಲ ಕೊಡುವವರಾರು?

ಬಂಡೇರಾಯ:—ಪ್ರಿಯೆ, ಈ ಚಿಂತೆಯು ನಿನಗೆ ಬೇಡ! ನಾನು ಎಂದಿನಂತೆ ಮುಂದೆಯೂ ತಂದು ಹಾಕುವೆನು! ಪ್ರಿಯತಮೆ, ಈ ನಗರದ ನಾಗರಿಕರಲ್ಲಿ ಲಕ್ಷ್ಮೀಪತಿಗಳೂ, ಲಕ್ಷ್ಮೀಪುತ್ರರೂ ಆದ ಶ್ರೀಮಂತರಲ್ಲಿ ಮೂರ್ಖರಿಗೆ ಕೊರತೆಯಿಲ್ಲ. ಇವರಲ್ಲಿ ಕೆಲವರು ಆತ್ಮಸ್ತುತಿಯಿಂದ ಸಂತುಷ್ಟರು; ಮತ್ತೆ ಕೆಲವರು ಅವರ ಒಂದೆರಡು ಕೆಲಸಗಳನ್ನು ಮಾಡಿಕೊಡುವದರಿಂದ ತುಷ್ಟರು. ಇವೆರಡಕ್ಕೂ ಹಣಿಯದವರು, ದೊಡ್ಡ ಬಡ್ಡಿಯ ಆಶೆಗೆ ಬಲಿಬೀಳುವರು. ಅಂತು ಈ ಜನರನ್ನು ಒಂದಿಲ್ಲೊಂದು ರೀತಿಯಿಂದ ಮೋಸಗೊಳಿಸಬಹುದು. ಈ ಕಲೆಯನ್ನು ನಾನು ಚನ್ನಾಗಿ ಕಲಿತಿಟ್ಟಿದ್ದೇನೆ. ಅಂತೆಯೇ ನಾನು ಪ್ರಪಂಚವನ್ನೂ, ನನ್ನ ಚೈನಿಯನ್ನೂ ಯಥಾಸ್ಥಿತವಾಗಿ

ಸಾಗಿಸುವ ವಿಷಯದಲ್ಲಿ ನಿರ್ಧಾಸ್ತನಾಗಿದ್ದೇನೆ! ಆದರೆ ಪ್ರಿಯೆ, ನೀನು ಯಾವತ್ತು ಭಾರವನ್ನು ನನ್ನ ಮೇಲೆ ಹೇರಿ, ಆಲಸ್ಯತನದಲ್ಲಿ ಕಾಲ ಕಳೆಯು ಬೇಕೆಂಬದು ನನ್ನ ಇಚ್ಛೆ ಇಲ್ಲ! ನಾನು ಒಂದು ಯುಕ್ತಿಯನ್ನು ಹೇಳಿಡು ವೆನು. ನೀನು ಅದರಂತೆ ನಡೆದೆಯಾದರೆ, ಸಂಸಾರ ಸಾಗಿಸುವದು ಬಹಳ ಹಗುರಾಗುವದು.

ತಾರೆ:—ತಮ್ಮ ಅರ್ಧಾಂಗಿನಿಯಾದ ನಾನು, ತಮ್ಮ ಹೇಳಿಕೆಯಂತೆ ಆಚರಿಸಲಿಕ್ಕೆ ಎಂದೆಂದಿಗೂ ತತ್ಪರಳೆ!

ಬಂಡೇರಾಯ:—ಹೀಗಿದ್ದರೆ ಹೇಳುವೆನು ಕೇಳು. ಈ ಪಟ್ಟಣದಲ್ಲಿ ಸದ್ಯಕ್ಕೆ ಸಾಕಷ್ಟು ಅಂಗಡಿಗಳಿದ್ದರೂ, ದಿನಾಲು ಹೊಸ ಹೊಸ ಅಂಗಡಿಗಳು ತಲೆಯೆತ್ತುವದರಲ್ಲಿವೆ. ಈ ಹೊಸ ಅಂಗಡಿಕಾರರಿಗೆ ಗಿರಾಕಿಗಳನ್ನು ಸಂಗ್ರಹಿಸುವ ಹಂಬಲವು ಬಹಳ. ಗಿರಾಕಿಗಳನ್ನು ಹೆಚ್ಚಿಸಿ ವ್ಯಾಪಾರವನ್ನು ಬೆಳೆಸಿ ಕೊಳ್ಳಬೇಕೆಂಬ ಭರದಲ್ಲಿ ಅವರು ಗಿರಾಕಿಗಳ ಸ್ಥಿತಿಗತಿಗಳ ಕಡೆಗೆ ಹೆಚ್ಚಾಗಿ ನೋಡುವದಿಲ್ಲ. ನೀನು ಈ ತರದ ಅಂಗಡಿಕಾರರ ಬಳಿಗೆ ಚೀಟಿಯನ್ನು ಬರಕೊಟ್ಟು ಪರಿಚಾರಿಕೆಯನ್ನು ಕಳುಹು. ಅಂಗಡಿಕಾರರು ಚೀಟಿಯ ಪ್ರಕಾರ ಸಾಮಾನು ಕೊಟ್ಟು ಕಳುಹುವರು. ನೀನು ಈ ಹಂಚಿಕೆಯನ್ನು ಸರಿಯಾಗಿ ಉಪಯೋಗಿಸಿದರೆ, ಪ್ರಪಂಚದ ಯಾವ ವಸ್ತುವಿನ ಕೊರತೆಯೂ ನಿನಗುಂಟಾಗದು.

ತಾರೆ:—ಇದು ಎಷ್ಟು ದಿವಸ ನಡೆದೀತು?

ಬಂಡೇ:—ಮುಂದಿನ ಆಲೋಚನೆಯು ಈಗ ಬೇಡ. ಮತ್ತೊಂದು ಮಾತೆಂದರೆ, ಒಬ್ಬ ಅಂಗಡಿಕಾರನಿಗೆ ನಮ್ಮ ನಿಜಸ್ಥಿತಿಯು ಗೊತ್ತಾಗುವದರೊಳಗೆ ನಾವು ಬೇರೊಬ್ಬ ಅಂಗಡಿಕಾರನನ್ನು ಆಶ್ರಯಿಸಿರಬೇಕು. ಹೀಗೆ ಒಂದೆರಡು ವರುಷಗಳನ್ನು ನಾವು ನಿರಾಯಾಸವಾಗಿ ಕಳೆಯಬಹುದು.

ತಾರೆ:—ಅಂಗಡಿಕಾರರು ಸುಮ್ಮನಿರುವರೆ? ಅವರು ದಾವೆ ಮಾಡಿ ನಿಮ್ಮನ್ನು ಕಚೇರಿಗೆ ಎಳೆದೊಯ್ಯರೆ?

ಬಂಡೇರಾಯ:—ಪ್ರಿಯೆ, ನೀನು ಹುಚ್ಚಳಿರುವೆ? ಆ ಅಂಗಡಿಕಾರರು ಎಷ್ಟು ಮಂದಿಯ ಮೇಲೆ ದಾವೆ ಮಾಡಬೇಕು? ವಿಸ್ತಾರವಾದ ಈ ನಗರದಲ್ಲಿ

ನಮ್ಮಂತಹ ವೇಷಧಾರಿಗಳಾದ ಶ್ರೀಮಂತರಿಗೆ ಕೊರತೆಯಿಲ್ಲ. ಈ ತರದ ಒಂದು ಟೋಳಿಯು ತಮಗೆ ಟೊಪ್ಪಿಗೆ ಹಾಕುತ್ತಿದೆಯೆಂಬದನ್ನು ಆ ಅಂಗಡಿಕಾರರು ಅರಿಯರೆಂದಲ್ಲ; ಆದರೂ ಅವರು ಗಿರಾಕಿಗಳನ್ನು ಬೆಳಿಸುವ ಭರದಲ್ಲಿ ಸರಾಲೋಚನೆಯಿಂದ ಮೋಸ ಹೋಗುತ್ತಾರೆ; ಹಾಗು ಈ ಸಂಬಂಧದ ಹಾನಿಯನ್ನು, ತಾವು ರೋಖು ವ್ಯಾಪಾರಮಾಡುತ್ತಿರುವೆವೆಂದು ಹೆಮ್ಮೆಗೊಂಡಿರುವ ಗಿರಾಕಿಗಳನ್ನು ವಂಚಿಸಿ ಅವರು ತುಂಬಿಕೊಳ್ಳುತ್ತಾರೆ!

ತಾರೆ:—ಆಗಲಿ, ನಾನು ಹೀಗೆಯೇ ಮಾಡುವೆನು. ನೀವು ನಿರುದ್ಯೋಗಿಗಳಾಗಿದ್ದು, ಕೇವಲ ಸಾಲ ದೊರಕಿಸುವದಕ್ಕೆ ಅಲೆಯುವಿರಾ?

ಬಂಡೇರಾಯ:—ಸಾಲ ದೊರೆಯುವದಕ್ಕೆ ಬಹಿರಂಗದಲ್ಲಿ ಯಾವುದೊಂದು ಹೋರೆಯ ಆಶ್ರಯವು ಬೇಕೇಬೇಕು! ಅದಕ್ಕಾಗಿ ನಾನಿನ್ನು ಗ್ರಂಥಕಾರನಾಗುವ ಶ್ರೇಷ್ಠತಮ ಉದ್ಯೋಗವನ್ನು ಕೈಕೊಳ್ಳುವೆನು. ಈ ಉದ್ಯೋಗಕ್ಕೆ ಮೂಲ ಧನವು ಬೇಡ. ಜನರಲ್ಲಿ ಗೌರವವಾದರೊ ಹೆಚ್ಚು! ಅಂತೆಯೇ ಈ ಕಾಲದಲ್ಲಿ ದಿನಾಲು ಗ್ರಂಥಕಾರರ ಸಂಖ್ಯೆಯು ಹೆಚ್ಚುವದರಲ್ಲಿದೆ!

ತಾರೆ:—ನೀವು ಗ್ರಂಥಕಾರರಾಗುವಿರಾ? ಆಶ್ಚರ್ಯದ ಮಾತೇ ಸರಿ!

ಬಂಡೇರಾಯ:—ಪ್ರಿಯೆ, ಈ ಜಗತ್ತಿನಲ್ಲಿ-ಇಪ್ಪತ್ತನೆಯ ಶತಮಾನದ ಈಗಳಿನ ಕಾಲದಲ್ಲಿ-ಮನುಷ್ಯರಿಗೆ ಅಸಾಧ್ಯವಾದದ್ದು ಒಂದೂ ಇಲ್ಲ. ಅರ್ಥಾತ್ ನಾನು ಗ್ರಂಥಕಾರನಾಗುವೆನಾದರೆ, ವಿಸ್ಮಯಕ್ಕೆ ಸ್ವಲ್ಪ ಸಹ ಎಡೆಯಿಲ್ಲ! ನಾನು ಗ್ರಂಥಕಾರನೇಕಾಗಬಾರದು? ನಾನು ಪುಸ್ತಕ ಬರೆಯಲಿಕ್ಕೆ ಅಯೋಗ್ಯನೆ? ನಮ್ಮ ನೆರೆಮನೆಯ ಕಲ್ಲನನ್ನು ನೀನು ಬಲ್ಲೆಯಷ್ಟೇ? ಅವನು ಇಷ್ಟು ದಿವಸ ಹಮಾಲಿಯ ಮಾಡಿ ಹೊಟ್ಟೆ ಹೊರಕೊಳ್ಳುತ್ತಿದ್ದನು. ಈಗಲವನು ತನ್ನ ಆ ಹಗ್ಗವನ್ನು ಬಿಸುಟ್ಟು, ಹೊತ್ತಿಗೆಗಳನ್ನು ಹುಟ್ಟಿಸಹತ್ತಿದ್ದಾನೆ! ಕಟುಕರ ಓಣಿಯಲ್ಲಿ ಹೊಸದಾಗಿ ಸ್ಥಾಪಿತವಾದ ಸಾಹಿತ್ಯಸಂಹಾರ ಸಂಘವು ಕಲ್ಲನ ಹೊತ್ತಿಗೆಗಳನ್ನು ಸುಂದರವಾದ ಕಾಗದದಲ್ಲಿ ಮುದ್ರಿಸಿ, ಚಿತ್ರಗಳಿಂದಲಂಕರಿಸಿ ಪ್ರಕಾಶಗೊಳಿಸಹತ್ತಿದೆ! ಪೇಟೆಯಲ್ಲಿ ಎಲ್ಲಿ ನೋಡಿದರೂ ಕಲ್ಲನ ಹೊತ್ತಿಗೆಗಳೇ! ಹೊಸ ಓದುಗರಲ್ಲಿಯ ಪ್ರತಿಯೊಬ್ಬನೂ ಕಲ್ಲನ ಹೊತ್ತಿಗೆಗಳನ್ನು ರೊಕ್ಕ ಕೊಟ್ಟು ಕೊಳ್ಳಹತ್ತಿದ್ದಾನೆ! ಇದರಿಂದ ಕಲ್ಲನಿಗೆ ಬಹಳ ಹಣ ಸಿಗು

ತ್ತದೆ. ಈಗಲವನ ದಂಭವನ್ನು ನೋಡಿ, ಮೊದಲಿನ ಅವನ ಸಹವಾಸಿಗಳು ಬಾಯ ಮೇಲೆ ಕೈ ಇಟ್ಟುಕೊಳ್ಳುತ್ತಿದ್ದಾರೆ!

ತಾರೆ:—ನಿಜವೆ?

ಬಂಡೇರಾಯ:—ಪ್ರಿಯೆ, ನಾನು ಸುಳ್ಳಾಡುವೆನೆ? ಕಲ್ಲನ ಈಗಿನ ವೈಭವವನ್ನು ನೋಡಿ ನನಗೆ ಆ ಆಶೆಹುಟ್ಟಿತಾದ್ದರಿಂದಲೇ ನಾನು ಗ್ರಂಥ ಕಾರನಾಗುವ ಸಂಕಲ್ಪ ಮಾಡಿಕೊಂಡಿದ್ದೇನೆ. ನಾನು ವಿದ್ಯಾರ್ಥಿಯಾಗಿದ್ದಾಗ ಕವಿತೆ ಮಾಡುವ ಚಟವುಳ್ಳವನಾಗಿದ್ದೆನು. ಆಗ ರಚಿಸಿದ ಹಲವು ಕವಿತೆ ಗಳು ಪ್ರಕಾಶವಾಗದೆ ಮೂಲೆಗುಂಪಾಗಿ ಬಿದ್ದಿದ್ದವು. ಮೊನ್ನೆ ನಾನವುಗಳನ್ನು ಕೂಡಿಸಿಕೊಂಡು ಒಬ್ಬ ಪ್ರಕಾಶಕನ ಬಳಿಗೆ ಹೋದೆನು. ಕುರ್ಚಿಯ ಮೇಲೆ ಸೆಟೆದು ಕುಳಿತಿದ್ದ ಅವನು ನನ್ನೊಡನೆ ಮಾತಾಡಲಿಲ್ಲ! ಬಳಿಕ ನಾನು ಮತ್ತೊಬ್ಬ ಪ್ರಕಾಶಕನ ಬಳಿಗೆ ಸಾಗಿದೆನು. ಅವನು ನನ್ನ ಸಂಗಡ ಮಾತ ನಾಡಿದರೂ, ನನ್ನ ಕವಿತೆಗಳನ್ನು ಪ್ರಕಾಶಗೊಳಿಸಲೊಪ್ಪಲಿಲ್ಲ. ತರುವಾಯ ನಾನು ಮತ್ತೊಬ್ಬ ಪ್ರಕಾಶಕನ ಹತ್ತಿರ ಹೋದೆನು. ಅವನು 'ಹೆಸರಾದ ಗ್ರಂಥಕಾರರ ಗ್ರಂಥಗಳನ್ನಷ್ಟೇ ತಾನು ಪ್ರಕಾಶಿಸುವವನು, ಉಳಿದವುಗಳನ್ನು ಕಣ್ಣೆತ್ತಿ ಸಹ ನೋಡೆನು' ಎಂದು ಸ್ಪಷ್ಟವಾಗಿ ಹೇಳಿಬಿಟ್ಟನು! ಕಡೆಗೆ ನಾನು ಬೇಸತ್ತು, ಸಾಹಿತ್ಯ-ಸಂಹಾರ-ಸಂಘಕ್ಕೆ ಶರಣು ಹೋದೆನು. ಪ್ರಿಯೆ, ಅವರ ವಿನಯವನ್ನು ಎಷ್ಟೆಂತ ವರ್ಣಿಸಲಿ? ಅವರು ನನ್ನನ್ನು ಕರೆದು, ಹತ್ತಿರ ಕುಳ್ಳಿರಿಸಿಕೊಂಡು, ಆದರದಿಂದ ನನ್ನೊಡನೆ ಮಾತಾಡಿದರು. ಕುಡಿ ಯುವದಕ್ಕೆ ಚಹವನ್ನು ಕೊಟ್ಟರು. ಮೆಲ್ಲುವದಕ್ಕೆ ತಾಂಬೂಲವಿತ್ತರು. ಸೇದುವದಕ್ಕೆ ಸಿಗರೇಟ ಚಾಚಿದರು. ಇಷ್ಟೆಲ್ಲ ಆದರಾತಿಥ್ಯದ ತರುವಾಯ ತಮಗೆ ಕವಿತೆಗಳು ಬೇಡವೆಂದೂ, ವಾಚಕರ ರುಚಿಗೆ ಸಲ್ಲುವಂಥ ಕಾದಂಬರಿ ಗಳೇ ಬೇಕೆಂದೂ ಸೂಚಿಸಿದರು. ನಾನವರ ಸೂಚನೆಯಂತೆ ಒಂದು ಹೊಸ ಮಾದರಿಯ ಕಾದಂಬರಿಯನ್ನು ರಚಿಸಬೇಕಾಗಿದೆ.

ತಾರೆ:—ಸ್ವಲ್ಪ ಸುಮ್ಮನಿರ್ರಿ. ಹೊರಗೆ ಯಾರೋ ಬಾಗಿಲ ಬಡಿಯು ವಂತೆ ಕಾಣುತ್ತದೆ!

ಬಂಡೇರಾಯ:—ಮತ್ತೂ ಬಾಕಿಯ ವಸೂಲಿಯೆ? ಅಯ್ಯೋ! ರಂಡೇ

ಮಕ್ಕಳಿಗೆ ಬೇರೆ ಹೋರೆಯೆ ಇರಲಿಕ್ಕಿಲ್ಲವೆ? ಈ ಹೊತ್ತಿನಲ್ಲಿ ಕೆಂಚನು ಇಲ್ಲವಲ್ಲ! ಪ್ರಿಯೆ, ಏನು ಮಾಡಬೇಕು? ಇವನನ್ನು ಯಾವ ಉಪಾಯದಿಂದ ತಿರುಗಿ ಕಳುಹಬೇಕು?

ತಾರೆ:—ನೀವು ಕೋಣೆಯಲ್ಲಿ ಹೋಗಿ ಮಲಗಿಕೊಳ್ಳಿರಿ. ನಾನು ಅವನನ್ನು ಉಪಾಯದಿಂದ ಅಟ್ಟಿ ಬರುವೆನು.

ಬಂಡೇರಾಯ:—ಒಳ್ಳೇ ಹಂಚಿಕೆ ತೆಗೆದೆ. ಇದೋ, ನಾನು ಹೊರಟೆನು. ನಿನ್ನ ಬುದ್ಧಿವಂತಿಕೆಯನ್ನು ಉಪಯೋಗಿಸಿ, ಅವನನ್ನು ಒಳ್ಳೇ ಮಾತಿನಿಂದ ಹಿಂದಿರುಗಿಸು.

(ಬಂಡೇರಾಯನು ಒಳಗೆ ಹೋಗುವನು. ತಾರೆಯು ಬಾಗಿಲ ಬಳಿಯಲ್ಲಿ ಬರುವಳು.)

ತಾರೆ:—ಯಾರವರು? ರಾಯರು ಮನೆಯಲ್ಲಿ ಇಲ್ಲವಪ್ಪಾ.

ಹೊರಗಿನವ:—ಇಲ್ಲದಿದ್ದರಿಲ್ಲ. ಬಾಗಿಲ ತೆರೆಯಿರಿ. ಒಂದು ಸಂತೋಷದ ಸಂಗತಿಯನ್ನು ತಿಳಿಸಲಿಕ್ಕೆ ಬಂದಿದ್ದೆನು. ರಾಯರು ಇಲ್ಲದಿದ್ದರೆ ಮನೆಯಲ್ಲಿದ್ದವರ ಮುಂದೆ ಹೇಳಿ ಹೋಗುವೆನು.

ತಾರೆ (ಆತ್ಮಗತಂ):—ಸಂತೋಷದ ಸಂಗತಿಯೆ? ಯಾವದಿರಬಹುದು; ಅಥವಾ ಸಾವುಕಾರರೂ ನಮ್ಮಂತೆಯೇ ಬುದ್ಧಿವಂತರಾಗಿ ಹಂಚಿಕೆಯಿಂದ ಮಾತಾಡುತ್ತಿರಬಹುದೇ? ಏನೇ ಆಗಲಿ, ಬಾಗಿಲ ತೆರೆಯುವೆನು.

---

## ೩ನೆಯ ಪ್ರವೇಶ.

[ಬಂಡೇರಾಯನ ಮನೆ, ತಾರೆಯೂ ಲಕ್ಷ್ಮೀ ವಕೀಲನೂ ಬರುವರು.]

ವಕೀಲ (ಕೈಯಲ್ಲಿ ಗಡಿಯಾರವನ್ನು ನೋಡಿ):—ನಿಮ್ಮೊಡನೆ ಹೆಚ್ಚಾಗಿ ಮಾತಾಡುತ್ತ ಕುಳ್ಳಿರುವದಕ್ಕೆ ನನಗೆ ಸಮಯವಿಲ್ಲದಾಗಿದೆ. ನೋಡಿರಿ, ಈಗಾಗಲೆ ಎರಡು ಹೊಡೆದು ಹೋಯಿತು! ಮೂರು ಗಂಟೆಗೆ ಕರೀಮ ಶೇಟಜಿಯು ನಮ್ಮ ಮನೆಗೆ ಬರತಕ್ಕವನಿದ್ದಾನೆ. ಮೂರೂವರೆ ಗಂಟೆಗೆ ಬ್ಲಡ್‌ಹಾವುಂಡ ಸಾಹೇಬನು ಬರುತ್ತೇನೆಂದು ಹೇಳಿದ್ದಾನೆ. ನಾಲ್ಕು ಗಂಟೆಗೆ ಹೊಸದಾಗಿ ಸ್ಥಾಪನೆಯಾಗುತ್ತಿದ್ದ ವಕ್ತೃತ್ವ ವಿಸ್ಫಾರಕ ಸಭೆಯಲ್ಲಿ ನಾನು ಹಾಜರಿರಬೇಕಾಗಿದೆ. ಐದುಗಂಟೆಗೆ ಟೇನೀಸ ಕೋರ್ಟಿಗೆ ಹೋಗಲೇಬೇಕು.

ತಾರೆ:—ಆಗಬಹುದು. ಮಾತು ಬಳೆಸುತ್ತ ನಿಲ್ಲುವದಕ್ಕೆ ನಮಗೂ ವೇಳೆಯಿಲ್ಲದಾಗಿದೆ. ನೀವು ಹೇಗೆ ಕಾರ್ಯತತ್ಪರರೋ, ನಾವೂ ಹಾಗೆಯೇ ಕಾರ್ಯಗಳಲ್ಲಿ ಕಾಲಕಳೆಯತಕ್ಕವರು. ನೀವು ಹೇಳತಕ್ಕದ್ದನ್ನು ಬೇಗನೆ ಹೇಳಿಬಿಡಿರಿ.

ವಕೀಲ:—ನಮ್ಮಂತೆಯೇ ನೀವೂ ದೀರ್ಘೋದ್ಯೋಗಿಗಳಾಗಿರುವದು ತುಂಬಾ ಸಂತೋಷದ ಸಂಗತಿಯು! ಆಲಸ್ಯದಲ್ಲಿ ಕಾಲ ಕಳೆಯುವವರನ್ನು ಕಂಡರೆ ನನ್ನ ತಲೆ ನೊಯ್ಯಹತ್ತುತ್ತದೆ! ಮುಖ್ಯವಾಗಿ ನಮ್ಮ ಹಿಂದೂ ಜನರಿಗೆ ವೇಳೆಯ ಬೆಲೆ ಗೊತ್ತಿಲ್ಲ ಸಮಯವೆಂದರೆ, ಬೆಲೆ ಬಾಳದ ತೀರ ಕ್ಷುಲ್ಲಕ ವಸ್ತುವೆಂದು ತಿಳಿದು ಹಾರಿಸಿ ಬಿಡುತ್ತಾರೆ! ಅದರಲ್ಲೂ ನಮ್ಮ ಹೆಂಗಳೆಯರಿಗೆ ಉದ್ಯೋಗವೆಂದರೆ ಬೇಡ! ನಿರರ್ಥಕ ಹರಟೆಯಲ್ಲೂ ಪರನಿಂದೆಯಲ್ಲೂ ವೇಳೆಯ ದೂಳ ಹಾರಿಸಿ ಬಿಡುವರು! ನಿಜಸ್ಥಿತಿಯು ಹೀಗಿರುವಾಗ, ಕರ್ತವ್ಯತತ್ಪರರಾದ ನಿಮ್ಮಂಥ ಹೆಂಗಸರನ್ನು ಕಂಡರೆ, ನನಗೆ ಮೇರೆ ಮೀರಿದ ಆನಂದವಾಗದೇನು ಮಾಡೀತು?

ತಾರೆ:—ನೀವು ವೇಳೆಯ ಬೆಲೆಯನ್ನು ಪೂರಾ ಅರಿತವರೆಂಬದು ನಿಮ್ಮ ವರ್ತನದಿಂದಲೂ ಮಾತಿನಿಂದಲೂ ಒಡೆದು ಕಾಣುತ್ತದೆ! ಆಗಲಿ, ಆ ಸಂತೋಷದ ಸಂಗತಿಯನ್ನಷ್ಟು ಹೇಳಿಬಿಡಿರಿ!

ವಕೀಲ:—ಒಂದು ಸಂತೋಷದ ಸಂಗತಿಯನ್ನು ಈಗಾಗಲೆ ತಿಳಿಸಿರುವೆನಷ್ಟೇ? ಇನ್ನೊಂದನ್ನು ಹೇಳುವೆನು ಕೇಳಿರಿ ನಮ್ಮ ಹೆಂಗಸರು ಅತ್ಯಧಿಕ ಲಜ್ಜಾಶೀಲರು. ಅವರ ಈ ನಾಚುಗೆಯು ಅಳತೆಗೆಟ್ಟು ಹೋಗಿದೆ! ನಮ್ಮಂಥವರನ್ನು ಕಂಡರೆ ಹುಲಿ-ಸಿಂಹಗಳನ್ನು ಕಂಡಂತೆ ಮಾಡುವರು! ತಮ್ಮ ಗಂಡಂದಿರ ಮೈಯಡರಿ ಹೋಗಿ ಕಲಹಿಸುವದಕ್ಕೂ ಹಿಂದೆಗೆಯದ ಹೆಂಗಳೆಯರು, ನಮ್ಮಂತಹರನ್ನು ಕಂಡರೆ ಮನೆಯ ಮೂಲೆಯಲ್ಲಿ ಅಡಗಿಕೊಳ್ಳುವರು. ಮಾನಿನಿಯರ ಈ ಮಾತಿಗೆ ಬಾರದ ಮೌನವು ನನಗೆ ಲೇಶಮಾತ್ರವೂ ಸೇರದು! ನೀವು ಈ ದೋಷದಿಂದ ದೂರಿರುವಿರಿ! ಇದು ಸಂತೋಷದ ಎರಡನೆಯ ಸಂಗತಿಯು.

ತಾರೆ:—ಇದೇನು? ನೀವು ಕೇವಲ ನನ್ನ ವರ್ಣನೆಯಲ್ಲಿಯೇ ಮಗ್ನ

ರಾದಿರಲ್ಲ! ನೀವು ಇದಕ್ಕಾಗಿಯೇ ಬಂದಿರುವಿರಾ?

ವಕೀಲ:—ಮನೆ ಮನೆಗೆ ಹೋಗಿ ಜನರ ವರ್ಣನೆ ಮಾಡುತ್ತ ಅಲೆಯುವದಕ್ಕೆ ನಾನೇನು ಬಟ್ಟಂಗಿಯೆ? ನಿರುದ್ಯೋಗದಲ್ಲಿಯೇ ಆಗಲಿ, ಹಾಳು ಹರಟೆಯಲ್ಲಿಯೇ ಆಗಲಿ ಕಾಲಹರಣ ಮಾಡುವದು ನನ್ನ ಸ್ವಭಾವವಲ್ಲೆಂದು ನಾನು ಮೊದಲೇ ನಿಮಗೆ ತಿಳುಹಿದ್ದೇನೆ; ಆದರೆ ಕಂಡ ಮಾತನ್ನು ಕಂಡಂತೆಯೇ ನುಡಿವುದು ನನ್ನ ಸ್ವಭಾವ. ಇದ್ದ ಮಾತನ್ನು ಇದ್ದಂತೆಯೆ ನಿರ್ಭಯದಿಂದ ನುಡಿಯುವದು ನನ್ನ ಕರ್ತವ್ಯವೆಂದು ನಾನು ಭಾವಿಸಿದ್ದೇನೆ. ಎಂತಹ ಕಠಿಣ ಪ್ರಸಂಗ ಬಂದರೂ, ನಾನು ನನ್ನ ಈ ಕರ್ತವ್ಯದಿಂದ ಲೇಶಮಾತ್ರವೂ ಚ್ಯುತನಾಗತಕ್ಕವನಲ್ಲ!

ತಾರೆ:—ಹೀಗಿದ್ದರೆ ಮುಂದೆ ಸಾಗಲಿ! ನಾನು ಬೇಡವೆನ್ನುವದಿಲ್ಲ! ಹೇಳಕ್ಕದ್ದನ್ನು ಸಾವಧಾನದಿಂದ ವಿಸ್ತರಿಸಿ ಹೇಳಿರಿ!

ವಕೀಲ:—ಸರಿಯಾಗಿ ಮಾತನಾಡಿದಿರಿ. ಗಿರಿನದಿಯ ಪ್ರವಾಹವನ್ನೂ ವಾಕ್ಪಟುವಿನ ಭಾಷಣವನ್ನೂ ತಡೆಯ ಬಯಸುವದು ಬುದ್ಧಿವಂತಿಕೆಯ ಕೆಲಸವಲ್ಲ! ಸತತೋದ್ಯೋಗಿಯಾದ ನಾನು, ನನ್ನ ಅಮೌಲ್ಯ ವೇಳೆಯನ್ನು ವೆಚ್ಚ ಮಾಡಿ ಉಚ್ಚರಿಸುತ್ತಿರುವ ಮಾತುಗಳು ಅನರ್ಘ್ಯವಾಗಿರಬೇಕೆಂಬದು ನಿಮಗೆ ಹೊಳೆಯದಿರದು! ಇರಲಿ. ನಾನಿನ್ನು ಹೇಳತಕ್ಕದ್ದನ್ನು ಮುಂದೆ ಸಾಗಿಸುವೆನು, ಕೇಳಿರಿ. ನನ್ನ ಇದುವರೆಗಿನ ಅನುಭವದಿಂದ ಈ ಮನೆಯ ರಾಯರು ಸುಧಾರಕರಾಗಿರಬೇಕೆಂಬದರಲ್ಲಿ ಸಂದೇಹವಿಲ್ಲ. ಅವರು ಸ್ತ್ರೀ ಶಿಕ್ಷಣ, ಸ್ತ್ರೀ ಸ್ವಾತಂತ್ರ್ಯ ಮೊದಲಾದ ಅತ್ಯವಶ್ಯ ಸಂಗತಿಗಳ ಪೋಷಕರಾಗಿರುವದು ಅತ್ಯಂತ ಸಂತೋಷದ ಸಂಗತಿಯು. ಅವರ ಅನುಗ್ರಹದಿಂದಲೆ ನೀವೀಗ ನನ್ನೊಡನೆ ದಿಟ್ಟತನದಿಂದ ಮಾತನಾಡುತ್ತಿರುವಿರಿ. ಅವರ ಬದಲು ನೀವು ಮನೆಯ ಹಿರಿಯತನವನ್ನು ನಡೆಸುತ್ತಿರುವಿರಿ.

ತಾರೆ:—ಇದು ಕೇವಲ ಅವರ ಅನುಗ್ರಹ ಸೂಚಕವಷ್ಟೇ ಏನು? ನಿಜವಾಗಿಯೂ ಹೆಂಗಸರಿಗೆ ಮನೆಯುಲ್ಲಿ ಯಾವ ಅಧಿಕಾರವೂ ಇಲ್ಲವೆ?

ವಕೀಲ:—ಛೇ, ಹೀಗೆ ಅನ್ನಲಿಕ್ಕೆ ಹೇಗೆ ಬಂದೀತು? ನನ್ನ ಮಾತುಗಳನ್ನು ಪೂರ್ಣವಾಗಿ ಕೇಳಿಕೊಳ್ಳಿರಿ. ಮನೆಯು ಹೆಂಗಸರದು. ಮನೆಯ

ಸಂಪೂರ್ಣ ಅಧಿಕಾರವು ಹೆಂಗಸರಿಗೇನೇ ಸಲ್ಲತಕ್ಕದ್ದು; ಆದರೆ ಸಂಕುಚಿತ ವಿಚಾರಿಗಳಾದ ಗಂಡಸರು ತಮ್ಮ ಅರ್ಧಾಂಗಿನಿಯರಿಗೆ ಅವರ ನಿಜವಾದ ಹಕ್ಕನ್ನು ಒಪ್ಪಿಸಲು ಸಮ್ಮತಿಸದಿದ್ದಾರೆ. ಸ್ವಾರ್ಥಾಂಧರಾದ ಅಧಿಕಾರ ಲೋಲುಪರ ತಂಡವದು! ಎಲ್ಲಕ್ಕೂ ಆಶ್ಚರ್ಯದ ಸಂಗತಿಯೆಂದರೆ, ಈ ತಂಡ ದವರೇ ಬ್ರಿಟಿಶರ ಕೈಯಿಂದ ಸ್ವರಾಜ್ಯವನ್ನು ಪಡೆಯುವೆವೆಂದು ಪಂಟು ಬಡೆಯುತ್ತಿದ್ದಾರೆ! ಏನೇ ಇರಲಿ, ನಿಮ್ಮ ರಾಯರು ಈ ಪಂಗಡದಲ್ಲಿ ಸೇರಿ ದವರಲ್ಲವೆಂಬದು ಸಂತೋಷದ ಸಂಗತಿಯಾಗಿರುವದರಲ್ಲಿ ಸಂದೇಹವಿಲ್ಲ. ನಿಮ್ಮ ರಾಯರ ದರ್ಶನವಾಗಿದ್ದರೆ ಒಳಿತಿತ್ತು. ಅವರ ಬದಲು ಅವರ ವಿದುಷಿಯಾದ ಅರ್ಧಾಂಗಿನಿಯ ದರ್ಶನವಾದದ್ದು ಅದಕ್ಕೂ ಹೆಚ್ಚಿನ ಸಂತೋ ಷದ ಸಂಗತಿಯೇ ಸರಿ! ನಿಮ್ಮನ್ನು ನೋಡಿ, ಅತ್ಯಾನಂದವಾದದ್ದರಿಂದಲೇ ನಾಲ್ಕು ಸರಸ ಮಾತುಗಳನ್ನಾಡಿದೆನು. ಇಲ್ಲವಾದರೆ, ನನ್ನಲ್ಲಿ ಮಾತು ಬಹಳ ತುಟ್ಟಿ! ಅರಸಿಕರ ಮುಂದೆ ನಾನು ಮಾತಾಡತಕ್ಕವನೇ ಅಲ್ಲ! ನನ್ನ ರಸಿಕ ಮಾತುಗಳಿಂದ ತಮಗೆ ತುಂಬಾ ಆನಂದವಾಗಿದೆಯೆಂಬದು ತಮ್ಮ ಮುಖಲಕ್ಷಣದಿಂದ ವ್ಯಕ್ತವಾಗುತ್ತಿರುವದನ್ನು ನೋಡಿ ನಾನು ಧನ್ಯನಾದೆನು! ಇನ್ನು, ಪ್ರಕೃತ ಸಂಗತಿಯನ್ನು ಹೇಳುವೆನು. ಲಕ್ಷ್ಯವಿಟ್ಟು ಕೇಳಿರಿ. ನಾನು ಈ ಪಟ್ಟಣದ ಪ್ರಸಿದ್ಧ ವಕೀಲನಾಗಿರುವೆನೆಂಬದನ್ನು ನಿಮಗೆ ಬೇರೆ ಯಾಗಿ ಹೇಳಲಿಕ್ಕೆ ಬೇಡ; ಯಾಕಂದರೆ, ನನ್ನನ್ನರಿಯದವನು ಈ ನಗರದಲ್ಲಿ ಒಬ್ಬನೂ ಇಲ್ಲವೆಂದೇ ನನ್ನ ಭಾವನೆ! ನನ್ನ ಧಂದೆಯ ಗಿರಾಕಿಗಳು ಬಹಳ. ಇವರಲ್ಲಿ ಖಂಡೇರಾವ ಬಾಯ್ಗುಳಿಯವರೊಬ್ಬರು. ಇವರು ಬಹಳ ಸಂಭಾ ವಿತರು. ದೇವಬ್ರಾಹ್ಮಣರಲ್ಲಿ ವಿಶ್ವಾಸವುಳ್ಳವರು. ಎಲ್ಲರಿಗಿಂತಲೂ ನನ್ನಲ್ಲಿ ಹೆಚ್ಚು ನಿಷ್ಠೆಯುಳ್ಳವರು. ಇವರು ನಿಮ್ಮ ಸಮೀಪದ ಸಂಬಂಧಿಕರು. ಇವ ರಿಗೆ ಈ ನಗರದಲ್ಲಿ ಸ್ಥಾವರ ಆಸ್ತಿಯಿತ್ತು; ಆದರೆ ಈಗ್ಗೆ ಹದಿನೈದು ವರುಷ ಗಳ ಹಿಂದೆ ಯಾವದೋ ಒಂದು ಕಾರಣದಿಂದ ಅವರು ಈ ಪಟ್ಟಣವಾಸಕ್ಕೆ ಬೇಸತ್ತರು. ತಮ್ಮ ಸ್ಥಾವರ ಆಸ್ತಿಯನ್ನೆಲ್ಲ ಮಾರಿಕೊಂಡು, ಈ ಊರಿಗೆ ಕಡೆಯ ಶರಣು ಹೊಡೆದು, ಮೊಗಲಾಯಿಯನ್ನು ಸೇರಿ ಸಿಂದಿಯ ವ್ಯಾಪಾರ ವನ್ನು ಮಾಡಹತ್ತಿದರು. ಅಲ್ಲಿ ಅವರು ಹತ್ತು ವರುಷ ವ್ಯಾಪಾರ ಮಾಡಿ,

ಎಷ್ಟು ಹಣವನ್ನು ಗಳಿಸಿದರೆಂಬದನ್ನು ನೀವು ಬಲ್ಲಿರಾ? ಛೇ, ಅದು ನಿಮಗೆ ಹೇಗೆ ಗೊತ್ತಾಗಬೇಕು? ಅವರು ಸಂಪಾದಿಸಿದ ಹಣವು ಕಲ್ಪನಾತೀತವು!

ತಾರೆ:—ಇರಬಹುದು. ಅವರು ನಮ್ಮವರಿಗೆ ಏನಾಗಬೇಕು?

ವಕೀಲ:—ಸಗೋತ್ರರು. ಮೂರು ತಲೆಗಳೇನೂ ಮಿಕ್ಕಿಲ್ಲ ಬಂಡೇರಾಯರು ಖಂಡೇರಾಯರ ದೂರದ ಮಕ್ಕಳು. ಇರಲಿ. ಮುಂದಿನ ಸಂಗತಿಯನ್ನು ಹೇಳುವೆನು ಕೇಳಿರಿ. ಖಂಡೇರಾಯರು ಹತ್ತು ವರುಷಗಳ ತರುವಾಯದಲ್ಲಿ ತಮ್ಮಲ್ಲಿಯ ಸಿಲ್ಕನ್ನು ಎಣಿಸಿ ನೋಡಲು, ನಾಲ್ಕು ಕೋಟಿ, ನಾಲ್ವತ್ತು ಲಕ್ಷ, ಆಯ್ವತ್ತೇಳುಸಾವಿರದಾ ಒಂಬೈನೂರಾ ಇಪ್ಪತ್ತೆರಡು ರೂಪಾಯಿಗಳು ಹೊರಟವು!

ತಾರೆ:—ಅಬ್ಬಬ್ಬಾ! (ಬಾಯ ಮೇಲೆ ಕೈಯಿಟ್ಟುಕೊಳ್ಳುವಳು ಒಳಗೆ ಮಲಗಿದ್ದ ಬಂಡೇರಾಯನು ವಿಸ್ಮಯಸೂಚಕ ಸ್ವರವನ್ನೆಬ್ಬಿಸಿದನು. ತಾರೆಯು ಇಂಗಿತದಿಂದ ಸುಮ್ಮನಿರುವಂತೆ ಸೂಚಿಸಿದಳು )

ವಕೀಲ:—ಧನಸಂಪಾದನೆಯ ಹಲವು ಉದ್ಯೋಗಗಳಲ್ಲಿ ವ್ಯಾಪಾರವು ತೀರ ಹೆಚ್ಚಿನದು. ಅಂತೆಯೇ ನಮ್ಮ ಹಿರಿಯರು 'ವಾಣಿಜ್ಯೇ ವಸತೇ ಲಕ್ಷ್ಮೀಃ' ಎಂದು ಹೇಳಿದ್ದಾರೆ.

ತಾರೆ:—ನಮ್ಮವರೂ ಈ ಮಾತನ್ನು ಹಗಲೆಲ್ಲ ಹೇಳುತ್ತಿದ್ದಾರೆ. ನಮ್ಮವರಿಗೂ ವ್ಯಾಪಾರದ ಲಕ್ಕು ಬಹಳ! ಅವರು ಸದಾ ಯಾವದೊಂದು ವ್ಯವಸಾಯದಲ್ಲಿ ಮನಸ್ಸು ಹಾಕಿರುತ್ತಾರೆ. ಪ್ರಪಂಚದ ಕಡೆಗೆ ಅವರ ಲಕ್ಷ್ಯವೇ ಇಲ್ಲ! ಹೀಗಾಗಿ ಮನೆಯ ಯಾವತ್ತು ಭಾರವು ನನ್ನ ಮೇಲೆಯೇ ಬಿದ್ದಿದೆ!

ವಕೀಲ:—ಇರಬಹುದು. ಈಗಲವರು ವ್ಯಾಪಾರಕ್ಕಾಗಿಯೇ ಹೊರಗೆ ಹೋಗಿರಬಹುದಲ್ಲವೆ? ಇರಲಿ. ನಾನು ಮುಂದೆ ಹೇಳುವೆನು, ಕೇಳಿರಿ. ಖಂಡೇರಾಯರು ಅಗಣಿತ ಧನವನ್ನು ಗಳಿಸಿದರಾದರೂ, ಅದನ್ನು ಅನುಭವಿಸುವದು ಅವರ ಹಣೆಯು ಬರಹದಲ್ಲಿರಲಿಲ್ಲ!

ತಾರೆ:—ಯಾಕೆ, ಏನಾಯಿತು?

ವಕೀಲ:—ಏನಾಯಿತೆಂದು ಕೇಳುವಿರಾ? ನಮ್ಮಲ್ಲಿ ಪರೋತ್ಕರ್ಷ

ಸಹಿಷ್ಣುತೆಯು ಇಲ್ಲ! ಹೊಟ್ಟೆಕಿಚ್ಚೆಂಬ ದುರ್ಗುಣವು ನಮ್ಮವರಲ್ಲಿ ಮನೆ ಮಾಡಿಕೊಂಡು ವಾಸಿಸಿದೆ! ನೆರೆಹೊರೆಯವರು ಶ್ರೀಮಂತರಾದರೆ ನಮಗೆ ಸೇರದು! ಇಂತಹ ಹೊಟ್ಟೆಯುರುಕರ ಕೈಯಲ್ಲಿ ಖಂಡೇರಾಯರು ಸಿಕ್ಕರು! ಆ ನೀಚರು ಖಂಡೇರಾಯರ ಮೇಲೆ ಇಲ್ಲದಲ್ಲದ ಆರೋಪಗಳನ್ನು ಹೊರಿಸಿ, ನಿಜಾಮನ ದರಬಾರದಲ್ಲಿ ಫಿರ್ಯಾದಿ ಮಾಡಿದರು. ಈ ಫಿರ್ಯಾದಿ ಗಳಿಂದ ಪಾರಾಗಬೇಕಾದರೆ ಖಂಡೇರಾಯರಿಗೆ ಐದು ವರುಷ ಬೇಕಾಯಿತು! ಖಂಡೇರಾಯರು ಒದಗಿದ ವಿಪತ್ತುಗಳಿಂದ ರಕ್ಷಣೆ ಹೊಂದಿ, ಮೊಗಲಾಯಿ ಯ ವಾಸಕ್ಕೆ ತೀರ ಬೇಸತ್ತು, ಪುನಃ ಈ ಕಡೆಗೆ ಬರುವ ಸಂಕಲ್ಪ ಮಾಡಿ ಕೊಂಡರು. ಆಗಲವರು ತಮ್ಮ ಶಿಲ್ಕು ರಕಮನ್ನು ಎಣಿಸಿ ನೋಡಲಾಗಿ, ಒಂದು ಲಕ್ಷ ನಾನೂರಾ ಅಯ್ವತ್ತೆರಡು ರೂಪಾಯಿ ಹನ್ನೆರಡೂವರೆ ಆಣೆ ಇದ್ದದ್ದು ಕಂಡುಬಂತು! ಒಂದು ಲಕ್ಷರೂಪಾಯಿಗಳನ್ನು ಭದ್ರಪಡಿಸಿಟ್ಟು, ಮೇಲಿನ ರಕಮನ್ನು ಹಾದಿಯ ವೆಚ್ಚಕ್ಕೆಂದು ತೆಗೆದಿಟ್ಟು, ಇತ್ತಕಡೆಗೆ ಪ್ರಯಾಣ ಬೆಳಸುವವರಾದರು.

ತಾರೆ:—ಅವರು ಇಲ್ಲಿಗೆ ಬಂದರೇನು?

ವಕೀಲ (ಗಡಿಯಾರವನ್ನು ನೋಡಿಕೊಂಡು):-ವೇಳೆಯು ಬಹಳವಾಯಿತು. ಇನ್ನು ಬೇಗನೆ ಮುಗಿಸುವೆನು. ಖಂಡೇರಾಯರು ಬಳ್ಳಾರಿಯ ವರೆಗೆ ಬಂದರು. ಬಳ್ಳಾರಿಯನ್ನು ನೋಡುವದಕ್ಕೆಂದು ಇಳಿದರು. ಅಲ್ಲಿಯೆ ಅವರಿಗೆ ಬೇನೆ ಬಂತು. ಆಗ ಅವರು ಅವಸರದಿಂದ ಆ ಲಕ್ಷ ರೂಪಾಯಿಗಳನ್ನು ಬ್ಯಾಂಕಿಗೆ ಕಳುಹಿಸಿಕೊಟ್ಟು, ಮೃತ್ಯುಪತ್ರವನ್ನು ತಯಾರಿಸಿದರು; ಬಳಿಕ ತುಸ ಹೊತ್ತಿನಲ್ಲಿಯೆ ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದರು!

ತಾರೆ:—ಪಾಪ! ಹಾದಿಯಲ್ಲಿಯೆ ಮಡಿದರೆ?

[ಕೆಂಚನು ಬಂದು ಒಂದು ಕಡೆಯಲ್ಲಿ ನಿಂತುಕೊಳ್ಳುವನು.]

ವಕೀಲ:—ಇದು ನೋಡಿರಿ, ಆ ಮೃತ್ಯುಪತ್ರವು. ಕನ್ನಡದಲ್ಲಿಯೆ ಬರೆಯಲ್ಪಟ್ಟದೆ. ನಾನಿದನ್ನು ನಿಮಗೆ ಓದಿ ಹೇಳುವೆನು, ಕೇಳಿರಿ. ಮೃತ್ಯು ಪತ್ರ ಬೆಸ್ಕಿ:—ಖಂಡೇರಾಯ ಬಾಯಪ್ಪಗಳಿ ಹಾಲಿವಸ್ತಿ ಬಳ್ಳಾರಿ ಇವರು ತಮ್ಮ ಮೃತ್ಯುಸಮಯದಲ್ಲಿ ಬರೆದುಕೊಡುವದೇನಂದರೆ:—ಹುಬ್ಬಳ್ಳಿಯು ನನ್ನ

ಖಾಸ ವಾಸಸ್ಥಳವು. ಅಲ್ಲಿ ನನ್ನ ಹೆಂಡತಿ ಮಕ್ಕಳಾರೂ ಇಲ್ಲ; ಆದರೂ ನನ್ನ ಸಗೋತ್ರಜರಲ್ಲಿ ಇಬ್ಬರು ಹತ್ತಿರದ ಸಂಬಂಧಿಕರಿದ್ದಾರೆ. ಇವರೇ ನನ್ನ ವಾರಸದಾರರು. ನಾನು ನನ್ನ ಕಷ್ಟಾರ್ಜಿತ ಆಸ್ತಿಯನ್ನು ನನ್ನ ಈ ಮರಣ ಸಮಯದಲ್ಲಿ ಈ ಇಬ್ಬರು ವಾರಸದಾರರಿಗೆ ಹಂಚಿಕೊಡುವ ಸಂಕಲ್ಪ ಮಾಡಿದ್ದೇನೆ. ಅದರ ವಿವರವು ಹೇಗೆಂದರೆ:—ಆ ಇಬ್ಬರು ವಾರಸದಾರರಲ್ಲಿ ಬಂಡೇರಾಯ ಬಾಯ್ಲುಗ್ಗಳಿಯು ಮೊದಲಿನವನು. ಇವನು ಸದ್ಯಕ್ಕೆ ಹುಬ್ಬಳ್ಳಿಯಲ್ಲಿಯೇ ಇದ್ದಾನೆಂದು ನಾನು ಕೇಳಿದ್ದೇನೆ. ಇವನು ತನ್ನ ಜೀವಮಾನದ ವರೆಗೆ ನನ್ನ ಜಂಗಮ ಆಸ್ತಿಯ ಬಡ್ಡಿಯನ್ನು ಹೊಂದುತ್ತ ಹೋಗಬೇಕು. ಇವನ ಮರಣದ ತರುವಾಯ ಎರಡನೆ ವಾರಸದಾರನಾದ ಗುಂಡೇರಾಯ ಬಾಯ್ಲುಗ್ಗಳಿಯು ನನ್ನ ಜಂಗಮ ಆಸ್ತಿಯನ್ನೆಲ್ಲ ಅಂದರೆ ಒಂದು ಲಕ್ಷ ರೂಪಾಯಿಗಳನ್ನು ಹೊಂದಬೇಕು....(ಮೃತ್ಯುಪತ್ರವನ್ನು ಮಡಿಚಿಟ್ಟುಕೊಂಡನು.)

[ಒಳಗೆ ಮಲಗಿದ್ದ ಬಂಡೇರಾಯನು ಆನಂದಾತಿರೇಕದಿಂದ ಚೀತ್ಕಾರ ಮಾಡಿದನು!]

ವಕೀಲ:—ಯಾರವರು? ಒಳಗೆ ಯಾರೋ ಕೂಗಿಕೊಂಡರಲ್ಲ!

(ತಾರೆಯು ಮಾತನಾಡಲಾರದವಳಾಗಿ ಗಂಡನ ಕಡೆಗೆ ಕ್ರುದ್ಧ ದೃಷ್ಟಿಯನ್ನು ಬೀರಿದಳು. ಬಂಡೇರಾಯನು ತನ್ನ ತಪ್ಪನ್ನು ತಿಳಿದು, ಸುಮ್ಮನಾದನು)

ತಾರೆ:—ನನ್ನ ಆಪ್ತರೊಬ್ಬರಿಗೆ ಜಡ್ಡಾಗಿದೆ. ಒಳಗೆ ಮಲಗಿದ್ದಾರೆ.

ವಕೀಲ:—ಹೀಗೋ? ನಾನು ಈ ಮನೆಯಲ್ಲಿ ಭೂತಗಳೇನಾದರೂ ಬಂದಿರಬಹುದೆಂದು ಭಯಗೊಂಡಿದ್ದೆನು! ನಿಮ್ಮ ಮಾತಿನಿಂದ ಆ ಭಯವು ದೂರಾಯಿತು! ಇರಲಿ. ಪ್ರಕೃತ ಸಂಗತಿಯ ಬಗ್ಗೆ ಇನ್ನು ಒಂದೆರಡು ಮಾತುಗಳನ್ನು ಹೇಳುತ್ತೇನೆ. ನೀವು ಮೃತ್ಯುಪತ್ರದ ಸಂಗತಿಯನ್ನು ತಿಳಿದಿರಷ್ಟೆ? ನಾನು ಬಂಡೇರಾಯರನ್ನೂ ಗುಂಡೇರಾಯರನ್ನೂ ಹುಡುಕಿ, ಅವರಿಗೆ ಈ ಸಂಗತಿಯನ್ನು ತಿಳಿಸಬೇಕಿತ್ತು. ನಾನಿಂದು ಅದೇ ಉದ್ದೇಶದಿಂದ ನಿಮ್ಮ ಮನೆಗೆ ಬಂದೆನು. ರಾಯರ ದರ್ಶನವಾಗಲಿಲ್ಲ. ಅವರು ಬಂದ ಬಳಿಕ ಅವರಿಗೆ ಎಲ್ಲ ಸಂಗತಿಯನ್ನು ಹೇಳಿ, ಅವರನ್ನು ನನ್ನ ಕಡೆಗೆ ಕಳುಹಿಕೊಡಿರಿ. ನಾನು ಮುಂದಿನ ವ್ಯವಸ್ಥೆಯನ್ನು ಮಾಡಿ ಕೊಡುವೆನು. ಒಂದು ವೇಳೆ ಬಂಡೇರಾಯರ ಪತ್ತೆಯಾಗದಿದ್ದರೆ: ಅಥವಾ ಅವರಿಗೆ ಈ ಹಣದ

ಬಡ್ಡಿಯ ಅಪೇಕ್ಷೆಯಿಲ್ಲದಿದ್ದರೆ, ನಾನು ಗುಂಡೇರಾಯನನ್ನು ಹುಡುಕಿ ಮುಂದಿನ ಕೆಲಸವನ್ನು ಮಾಡಬೇಕಿದೆ. ಇದಕ್ಕೋಸ್ಕರ ವರ್ತಮಾನಪತ್ರಗಳಲ್ಲಿ ಜಾಹೀರಾತುಗಳನ್ನು ಕೊಟ್ಟಿದ್ದೇನೆ. (ಬಂಡೇರಾಯನು ಬಂದು ಬೆನ್ನ ಮೇಲೆ ಕೈಯಿಡುವನು. ವಕೀಲನು ಗಾಬರಿಯಾಗುವನು) ಇದೇನು? ಯಾರವರು?

ಬಂಡೇರಾಯ:—ನಾನೇ............

ವಕೀಲ:—ನೀವು............?

ಬಂಡೇರಾಯ:—'ಬಂಡೇರಾಯ ಬಾಯ್ಬುಗ್ಗೆ!'

ವಕೀಲ:—ನೀವು ಮನೆಯಲ್ಲಿಯೇ ಇದ್ದಿರಾ? ನಿಮ್ಮ ಅರ್ಧಾಂಗಿನಿಯೇ ನೀವು ಮನೆಯಲ್ಲಿಲ್ಲವೆಂದು ಹೇಳಿದಳು! ಮನೆಯ ಯಜಮಾನಿಯ ಮಾತನ್ನು ನಂಬಕೂಡದೆ! ಇದರಲ್ಲಿ ನನ್ನದೇನಾದರೂ ದೋಷವಿದೆಯೆ?

ಬಂಡೇರಾಯ:—ನಿಮ್ಮ ದೋಷವೇನೂ ಇಲ್ಲ! ನಾನು ಮನೆಯ ಹೊರಗೆ ಹೋಗುವವನಿದ್ದೆನು; ಆದರೆ ನಿಮ್ಮ ಆಶೆಯ ವಾಣಿಯಿಂದ ಪುನಃ ಮನೆಯಲ್ಲಿರುವ ಸಂಕಲ್ಪ ಮಾಡಿಕೊಳ್ಳಬೇಕಾಗಿದೆ!

ವಕೀಲ:—ಅಂದರೆ?

ಬಂಡೇರಾಯ:—ಅಂದರೇನೆಂಬದರ ವಿವರಣೆ ಮಾಡಬೇಕೆ? ರಾಯರೆ, ಲಕ್ಷ ರೂಪಾಯಿಗಳು! ಲಕ್ಷ ರೂಪಾಯಿಗಳು ತಾವೇ ತಾವಾಗಿ ಬಂದು ಕೈಸೇರುತ್ತಿರುವಾಗ, ಯಾವನಾದರೂ ಮನೆಬಿಟ್ಟು ಓಡಿಹೋಗ ಬಯಸುವನೆ? ಲಕ್ಷ ರೂಪಾಯಿಗಳೇನು ಸಾಮಾನ್ಯವಾದವುಗಳೆ?

ವಕೀಲ:—ಲಕ್ಷ ರೂಪಾಯಿಗಳು ನಿಮ್ಮವಲ್ಲ! ಅವು ಗುಂಡೇರಾಯ ಬಾಯ್ಬುಗ್ಗೆಯವರವು! ನೀವು ಕೇವಲ ಬಡ್ಡಿಯ ಮಾಲಕರು!

ಬಂಡೇರಾಯ:—ಇದೇನು ಕಡಿಮೆಯೆ? ರಾಯರೆ, ಈ ದಿನಗಳಲ್ಲಿ ಇಷ್ಟು ರೂಪಾಯಿಗಳನ್ನು ಸುಮ್ಮ ಸುಮ್ಮನೆ ಕೊಡುವವರಾರು? ಒಂದು ಲಕ್ಷ ರೂಪಾಯಿಗಳ ಬಡ್ಡಿ!

ವಕೀಲ:—ನೀವೆನ್ನುವುದೂ ನಿಜವೆ! ಈಗ ನನಗೆ ಹೊತ್ತಾಯಿತು. ಹೋಗುವೆನು. ಪುನಃ ಅವಕಾಶ ನೋಡಿಕೊಂಡು ಬರುವೆನು. ಕೆಲಸಗಳು ಬಹಳ. ಒಂದೆಡೆಯಲ್ಲಿ ತಾಸೆರಡುತಾಸು ಆರಾಮ ಕುಳಿತೇನೆಂದರೆ, ನಡೆಯದು!

(ಹೋಗುವನು.)

ಬಂಡೇರಾಯ:—ಪ್ರಿಯೆ,........

ತಾರೆ:—ಪ್ರಾಣನಾಥ,........

ಕೆಂಚ:—ರಾಯರೆ,........

ಬಂಡೇರಾಯ:—ಎಲೋ, ನೀನು ಈ ಸಮಯದಲ್ಲಿ ಕಾರಭಾರ ಮಾಡ ಬಂದೆಯಾ? ನಡೆಯತ್ತ! ಪ್ರಿಯೆ........

ತಾರೆ:—ನಮ್ಮ ಪ್ರಾರಬ್ಧಕ್ಕೆ ಎಣೆಯಿಲ್ಲ! ನಮ್ಮ ಸುದೈವವು ನಮ್ಮ ಈ ಅಡಚಣಿಯ ವೇಳೆಯಲ್ಲಿ ನಮ್ಮನ್ನು ಸುಖರೂಪದಿಂದ ಪಾರುಮಾಡಲಿಕ್ಕೆ ಧನವನ್ನು ಧಾರೆಯೆರೆಯುತ್ತದೆ! ಒಂದು ಲಕ್ಷ ರೂಪಾಯಿಗಳು!

ಬಂಡೇರಾಯ:—ಅಹುದು, ಒಂದು ಲಕ್ಷ ರೂಪಾಯಿಗಳು! ಇನ್ನೂ ನನ್ನ ಕೈ ಸೇರಿಲ್ಲ! ಮೃತ್ಯುಪತ್ರದಲ್ಲಿ ಅಡಕವಾಗಿವೆ!

ತಾರೆ:—ಇನ್ನು ನಿಶ್ಚಿಂತರಾಗಿರಿ. ಹಣವು ಕೈಸೇರುತ್ತಲೆ, ಸಾಲವನ್ನೆಲ್ಲ ತೀರಿಸಿಬಿಡಿರಿ! ಪೀಡೆ ಪರಿಹಾರವಾಗಲಿ! ಕಟಕಟಿಯು ತಪ್ಪಲಿ!

ಬಂಡೇರಾಯ:—ಪ್ರಿಯೆ, ನಿನಗೆ ಹುಚ್ಚು ಹಿಡಿಯಿತೆ? ಸಾಲವನ್ನು ತೀರಿಸಲಿಯಾ?

ತಾರೆ:—ಯಾಕೆ? ಅದೇಕೆ ತೀರಿಸಕೂಡದು?

ಬಂಡೇರಾಯ:—ಒಳಿತೆನ್ನು! ಆ ಮಾತು ಸರ್ವಥಾ ಎತ್ತಬೇಡ! ತೀರಿಸುವದಕ್ಕೆಂದು ಸಾಲ ಮಾಡಿರುವೆನೆ? ಅಳತೆಗೆಟ್ಟು ಸಾಲ ಮಾಡಿಕೊಂಡವನು ಅದನ್ನು ತೀರಿಸುವ ಹವ್ಯಾಸಕ್ಕೆ ಎಂದೆಂದಿಗೂ ಬೀಳನು!

ತಾರೆ:—ಅವ್ವಯ್ಯಾ!

ಬಂಡೇರಾಯ:—ನೀನು ಸುಮ್ಮನಿರು! ನಾನು ಎಲ್ಲ ವ್ಯವಸ್ಥೆಯನ್ನೂ ಸಂಪಡಿಸುವೆನು. ನನ್ನ ಈಗಳಿನ ಸಾಲದ ಹೋರೆಯನ್ನು ನನ್ನ ವಾರಸುದಾರರ ಮೇಲೆ ಒಗೆದುಬಿಡುವೆನು. ನಾನು ನಿಶ್ಚಿಂತನಾಗಿದ್ದು, ಬರುತ್ತಿರುವ ಹಣದ ಉಪಭೋಗವನ್ನು ಯಥೇಚ್ಛವಾಗಿ ತಕ್ಕೊಳ್ಳುವೆನು! ನನ್ನ ಅರ್ಧಾಂಗಿನಿಯಾದ ನೀನು ನನ್ನ ಈ ಉಪಭೋಗದ ಪಾಲುಗಾರಳಾಗಿರುವಿಯೆಂಬದನ್ನು ಹೇಳಲಿಕ್ಕೆ ಬೇಡ!

ತಾರೆ:—ಆ ರೂಪಾಯಿಗಳು ಎಂದು ನಿಮ್ಮ ಕೈ ಸೇರುವವು?

ಬಂಡೇರಾಯ:-ಮೃತ್ಯುಪತ್ರದಲ್ಲಿ ಉಲ್ಲೇಖವಿದ್ದ ಬಳಿಕ ಆ ರೂಪಾಯಿಗಳನ್ನು ತರುವದೇನು ತಡ? ಲಕ್ಷ ರೂಪಾಯಿಗಳ ಬಡ್ಡಿ! ವಾಹವ್ವಾ! ಇನ್ನು ನನ್ನನ್ನು ಹಿಡಿದವರಾರು? ಇನ್ನು ನನ್ನ ಸೌಖ್ಯಕ್ಕೆ ಎಣೆಯುಂಟೇ? ದಿಲ್ಲಿಯ ಬಾದಶಹನೂ ನನ್ನ ವೈಭವವನ್ನು ನೋಡಿ ನಾಚಬೇಕು! (ಹುಚ್ಚನಂತೆ ಕುಣಿದಾಡುವನು)

ತಾರೆ:—(ಚಿಂತಿತಳಾಗಿ) ಇಗೋ, ನನ್ನ ಮಾತನ್ನು ಕೇಳಿರಿ

ಬಂಡೇರಾಯ:—ನಿನ್ನ ಮಾತು ಕೇಳುವದು ನನಗೆ ಬೇಡ! ಲಕ್ಷ ರೂಪಾಯಿ! ಲಕ್ಷ ರೂಪಾಯಿ! ಸಾಮಾನ್ಯವೆ?

ತಾರೆ:—ಇದೇನು ಹುಡುಗಾಟಿಕೆಯು? ನಿಮಗೆ ಹುಚ್ಚೇಹಿಡಿಯಿತು! ಹೀಗೆ ಮಾಡಬೇಡಿರಿ! ನನ್ನ ಮಾತು ಕೇಳಿರಿ.

ಬಂಡೇರಾಯ:—ಆಗಲಿ! ಹೇಳೋಣವಾಗಲಿ!

ತಾರೆ:—ನೀವು ಸುಳ್ಳೇ ಭ್ರಾಂತರಾಗಬೇಡಿರಿ! ಲಕ್ಷ ರೂಪಾಯಿಗಳು ನಿಮ್ಮವಲ್ಲ! ಗುಂಡೇರಾಯನವು. ನೀವು ಕೇವಲ ಬಡ್ಡಿಯ ಮಾಲಕರು! ಆನೆಯು ಅವನದು; ಬಾಲವಷ್ಟೇ ನಿಮ್ಮದು!

ಬಂಡೇರಾಯ:—ಹೀಗೆ ಹೇಳುವವರಾರು? ನನ್ನೆದುರಿಗೆ ಈ ಮಾತೇ? ಎಲ್ಲಿಯ ಗುಂಡೇರಾಯ? ಮೂರ್ಖ! ಹುಚ್ಚುಮುಂಡೇ ಗಂಡ!....

ತಾರೆ:—ನಿಮ್ಮ ಹುಚ್ಚು ಮತ್ತಿಷ್ಟು ಹೆಚ್ಚಿತು! ಅವನು ನಿಮ್ಮ ತಮ್ಮನಲ್ಲವೆ? ತಮ್ಮನಿಗೆ ಹೀಗೆ ಬಯ್ಯುವದೆ? ಬೇಡ, ಹೀಗೆ ಅಸಂಬದ್ಧ ಬಡಬಡಿಸುವದು ಬೇಡ!

ಬಂಡೇರಾಯ:—ಪ್ರಿಯೆ, ಆ ಗುಂಡೇರಾಯನೆಲ್ಲಿ ಬರಬೇಕು? ನಾನೇ ಗುಂಡೇರಾಯ! ನಾನೇ ಬಂಡೇರಾಯ!

ತಾರೆ:—ಅಹಾ! ಹೀಗೆ ಆಗಿದ್ದರೆ, ಎಷ್ಟು ನೆಟ್ಟಗಾಗುತ್ತಿತ್ತಲ್ಲ!

ಬಂಡೇರಾಯ:—ಇನ್ನೂ ಆಗಬೇಕೇನು? ಆಗಿ ಹೋಗಿದೆ! ಆ ಮೂರ್ಖನು ಮಲೆಯಾಳದ ಮೋರೆಯಲ್ಲಿ ಮಡಿದು ಹೋಗಿದ್ದಾನೆ.! ಅವನು ಸುಡುಗಾಡಿನಿಂದ ಎದ್ದು ಬರುವನೆ?

ತಾರೆ:—ಅವ್ವಯ್ಯಾ! ಇದು ನನ್ನ ನೆನಪಿನಲ್ಲಿರಲೇ ಇಲ್ಲ! ಒಳ್ಳೇ ಅನುಕೂಲ ಸಮಯ! ಈ ವೇಳೆಯಲ್ಲಿ ನೀವು ಒಂದು ಕೆಲಸವನ್ನು ಮಾಡಿದರೆ....

ಬಂಡೇರಾಯ:—ಅದು ಯಾವ ಕೆಲಸ?

ತಾರೆ:—ನಾನು ಹೇಳಿದಂತೆ ಮಾಡಿದರೆ, ಆ ಲಕ್ಷ ರೂಪಾಯಿಗಳನ್ನು ನೀವೇ ಹೊಂದುವಿರಿ!

ಬಂಡೇರಾಯ:—ಯಾರು ಒಲ್ಲೆನ್ನುವರು? ಹೇಳಿಬಿಡು ನೋಡೋಣ!

ತಾರೆ:—ನೀವು ಸಾಯಬೇಕು................

ಬಂಡೇರಾಯ (ಚಮಕಿತನಾಗಿ):—ನಾನು ಸಾಯಲಿಯಾ? ಹೇಗೆ ಸಾಯಲಿ? ಸತ್ತು ಸುಡುಗಾಡ ಸೇರಿದ ಬಳಿಕ ಮತ್ತೆ ಲಕ್ಷ ರೂಪಾಯಿಗಳ ಉಪಭೋಗಕ್ಕೆ ಎದ್ದು ಬರಬೇಕೆ? ವಾಹವ್ವಾ! ಒಳ್ಳೇ ಹಂಚಿಕೆ!

ತಾರೆ:—ಹೌದು, ನೀವು ಸಾಯಲೇಬೇಕು! ಸತ್ತರೇನೇ ರೂಪಾಯಿಗಳು ನಿಮ್ಮವಾಗುವವು! ನಿಮ್ಮ ಕೈಕಾಲು ಬೀಳುವೆನು, ಒಮ್ಮೆ ಸಾಯಿರಿ! ನಿಮಗೆ ಸೆರಗೊಡ್ಡಿ ಬೇಡಿಕೊಳ್ಳುವೆನು, ಒಮ್ಮೆ ಸಾಯಿರಿ!

ಬಂಡೇರಾಯ:—ವಾಹವ್ವಾ! ಒಳ್ಳೇ ಪತಿವ್ರತೆಯಾದ ಹೆಂಡತಿ! ಸಜೀವನಾಗಿ ಮೋಟು ಮರದಂತೆ ನಿನ್ನೆದುರಿನಲ್ಲಿ ನಿಂತಿದ್ದ ನಾನು ಸತ್ತು ಹೋಗಲಿಯಾ? ಜಡ್ಡು ಇಲ್ಲ! ಜಾಪತ್ರಿ ಇಲ್ಲ! ಸಾಯಲಿಕ್ಕೆ ನನಗೇನಾಗಿದೆ? ನಾನು ಸಾಯುವದು ಹೇಗೆ?

ತಾರೆ:—ಪ್ರಾಣನಾಥ, ಏನೇ ಇರಲಿ. ನೀವು ಒಮ್ಮೆ ಸಾಯಲೇಬೇಕು; ಬೇರೆ ಉಪಾಯವಿಲ್ಲ. ನೀವು ಸತ್ತ ಹೊರತು ಆ ರೂಪಾಯಿಗಳನ್ನು ಹೊಂದಲಾರಿರಿ! ನನ್ನ ಹಂಚಿಕೆಯು ಅಮೋಘವಾದದ್ದು! ಅದರಂತೆ ಕೆಲಸವಾಗಲೇ ಬೇಕು! ನೀವು ಸಾಯಬೇಕು! ನಾನು ಒಳ್ಳೇ ಸಡಗರದಿಂದ ನಿಮ್ಮ ಶ್ರಾದ್ಧ ಮಾಡಿಸುವೆನು! ಒಲ್ಲೆನೆನ್ನಬೇಡಿರಿ! ಪ್ರಾಣನಾಥ, ನನ್ನ ಇದೊಂದು ಮಾತ ನಡಿಸಿರಿ.

ಬಂಡೇರಾಯ (ಗದಗದನೆ ನಡುಗಿ): —ಎಂತಹ ಹೆಂಗಸು ನೀನು? ನಿನ್ನ ಪ್ರಣಯವೇನು? ಸಾವಿತ್ರಿಯು ಮೃತಪತಿಯ ಪುನರ್ಜೀವನಕ್ಕಾಗಿ ಹೇಗೆ ಪ್ರಯತ್ನಿಸಿದಳೆಂಬದನ್ನು ನೀನರಿಯೆಯಾ? ನೀನು ಅದಕ್ಕೆ ವಿಪರೀತವಾಗಿ

ಜೀವಂತ ಪತಿಯ ಮರಣಕ್ಕೆ ಮನಸ್ಸು ಮಾಡಿರುವೆ? ಕಲಿಕಾಲವಿದು, ಘೋರ ಕಲಿಕಾಲ! ಇಲ್ಲದಿದ್ದರೆ, ನಿನಗೆ ಇಂತಹ ದುರ್ಮತಿಯು ಹೇಗೆ ಉಂಟಾಗಬೇಕು? ನನ್ನನ್ನು ಕೊಂದು, ಆ ಲಕ್ಷ ರೂಪಾಯಿಗಳನ್ನೂ, ಗುಂಡೇರಾಯನನ್ನೂ ಹೊಂದಿ ಬೆಡಗಿನಿಂದಿರಬೇಕೆಂದು ಮಾಡಿರುವೆಯಾ? ರಾಮ! ರಾಮ!

ತಾರೆ:—ಅಯ್ಯೋ! ಎಂಥ ಮಾತಾಡುತ್ತಿರುವಿರಲ್ಲ! ನಿಮ್ಮ ಹುಚ್ಚು ಹಾಳಾಗಲಿ! ನಾನು ಹೇಳಿದ್ದೊಂದು, ನೀವು ತಿಳಕೊಂಡಿರುವದೊಂದು! ನಾನು ಹೇಳಿದ್ದು ನಿಜವಾದ ಮರಣವಲ್ಲ! ನಿಶ್ಚೇಷ್ಟವಾಗಿ ಬಿದ್ದುಕೊಂಡು ನಾಲ್ವರ ಹೆಗಲಿನ ಹೊರೆಯಾಗಬೇಕೆಂದು ನಾನು ಹೇಳಿದವಳಲ್ಲ! ಉರಿಯುತ್ತಿರುವ ಚಿತೆಯಲ್ಲಿ ನಿರ್ಜೀವ ವಸ್ತುವಿನಂತಿದ್ದು, ಸುಟ್ಟು ಬೂದಿಯಾಗಿ ಹೋಗಬೇಕೆಂದು ನಾನು ಅಂದವಳಲ್ಲ! ನಾನು ಹೇಳಿದ ಮರಣವು ಬೇರೆ ವಿಧವಾದದ್ದು!

ಬಂಡೇರಾಯ:—ಅದರ ವಿವರಣೆಯನ್ನಷ್ಟು ಮಾಡಿಬಿಡು! ನೀನು ಹೇಳಿದ ಮರಣವೆಂತಹದು!

ತಾರೆ:—ನಾನು ಹೇಳುವದು "ಮೋಜಿನ ಮರಣ!" ನೀವು ಸತ್ತಿರಬಾರದು! ಅಂತ್ಯವಿಧಿಗಳನ್ನು ಅನುಭವಿಸಿರಬಾರದು! ಆದರೂ ಸತ್ತಿರಬೇಕು! ಜನರೆಲ್ಲರೂ ನೀವು ಸತ್ತಿರುವಿರೆಂದೇ ತಿಳಿಯಬೇಕು! ನಿಮ್ಮ ಮರಣದ ವಿಷಯದಲ್ಲಿ ಯಾರಿಗೂ ಸಂದೇಹ ಉಳಿಯಕೂಡದು! ನೀವು ಇಷ್ಟು ಉತ್ತಮ ರೀತಿಯಿಂದ ಜನರ ಕಣ್ಣಿಗೆ ದೂಳವನ್ನುಗ್ಗಬೇಕು!

ಬಂಡೇರಾಯ:—ಇದು ಹೇಗೆ ಸಾಧ್ಯವಾಗಬೇಕು? ಜೀವವು ದೇಹ ಪಂಜರದಿಂದ ಹಾರಿ ಹೋದ ಹೊರತು ಜನರು ಸತ್ತನೆಂದೆನ್ನುವಂತಿಲ್ಲ! ಜನರ ದೃಷ್ಟಿಯಿಂದ ಒಮ್ಮೆ ಸತ್ತು ಹೋದ ಮನುಷ್ಯನು ತಿರುಗಿ ಬದುಕುವಂತಿಲ್ಲ!

ತಾರೆ:—ಛೀ, ಹೀಗೆ ಆಗಕೂಡದು. ಸತ್ತಿರಬಾರದು! ಜನರಾದರೋ ಸತ್ತನೆಂದು ಆಡಿಕೊಳ್ಳಬೇಕು! ಇಂಥದೊಂದು ಯುಕ್ತಿಯನ್ನವಲಂಬಿಸಬೇಕು!

ಬಂಡೇರಾಯ:—ಆ ಯುಕ್ತಿಯನ್ನು ನೀನೇ ಹೇಳಿಕೊಡು ನನ್ನಲ್ಲಿ

ಇಂತಹ ಹಂಚಿಕೆಗಳು ದೊರೆಯವು!

ತಾರೆ:—ಆಗಲಿ, ನಾನೇ ಹೇಳಿಕೊಡುವೆನು. ನೀವು ಸಾಯಬೇಕು!

ಬಂಡೇ:—ಮತ್ತೂ ಅದೇ ಮಾತು! ಆಗಲಿ, ಮುಂದೆ ಮಾತಾಡು!

ತಾರೆ:—ಬಳಿಕ ನಾನು ಅಳುವೆನು! ಬಹಳವಾಗಿ ಅಳುವೆನು! ಎದೆ ಎದೆ ಬಡಕೊಂಡು ಕೀಸರಿಡುವೆನು! ಶೋಕಿಸಿ ಶೋಕಿಸಿ ಹೌಹಾರಿ ಬೀಳುವೆನು! ಜನರು ನನ್ನ ಆ ದುಃಖಾತಿರೇಕವನ್ನು ಕಂಡು, ಸಹಾನುಭೂತಿಯ ಶಬ್ದಗಳನ್ನುಚ್ಚರಿಸಲಿ ನನ್ನನ್ನು ಸಾಂತ್ವನೆಗೊಳಿಸಲು ಪ್ರಯತ್ನಿಸಲಿ! ಬಳಿಕ ಶೋಕದ ಭರದಲ್ಲಿದ್ದಂತೆಯೇ ನಟಿಸಿ, ಶ್ರಾದ್ಧದ ತಯಾರಿಗೆ ತೊಡಗುವೆನು ಸಡಗರದಿಂದ ನಿಮ್ಮ ಶ್ರಾದ್ಧವನ್ನು ಮಾಡಿಸುವೆನು. ಬ್ರಾಹ್ಮಣರು ಭೋಜನ-ದಕ್ಷಿಣೆಗಳಿಂದ ಸಂತುಷ್ಟರಾಗಿ ಹೋಗಲಿ!

ಬಂಡೇರಾಯ:—ನಿನ್ನ ರಗಳೆಯನ್ನು ಸಾಕು ಮಾಡು! ನಾನಿದನ್ನು ಕೇಳಲಾರೆನು! ನಿನ್ನ ಈ ಮಾತುಗಳನ್ನು ಕೇಳಿದ ನನಗೆ ಮರಣವ್ಯಥೆಗಿಂತಲೂ ಹೆಚ್ಚಾದ ವ್ಯಥೆಯಾಗುತ್ತದೆ! ರಾಮ! ರಾಮ! ಎಂತಹ ಅಭದ್ರ ಮಾತುಗಳನ್ನಾಡುತ್ತಿರುವೆಯಲ್ಲ!! ನಿನ್ನ ನಾಲಿಗೆ ಹುಳಿತು ಹೋಗಲಿ!!!

ತಾರೆ:—ಎಂಥ ಹುಚ್ಚರು ನೀವು? ನಾನಾಡಿದ್ದರಲ್ಲಿ ನೀವು ವ್ಯಥೆಗೊಳ್ಳಬೇಕಾದ ಸಂಗತಿಯೊಂದೂ ಇಲ್ಲ! ನಿಮ್ಮ ಲಾಭಕ್ಕಾಗಿ ನಾನು ಹೀಗೆ ಮಾತಾಡುತ್ತಿರುವೆನಲ್ಲದೆ ಬೇರಿಲ್ಲ! ನನ್ನ ಮಾತನ್ನು ಪೂರ್ಣವಾಗಿ ಕೇಳಿಕೊಳ್ಳಿರಿ! ಶ್ರಾದ್ಧಾದಿ ಕಾರ್ಯಗಳು ಮುಗಿದು, ಶಾಂತತೆಯುಂಟಾದ ಬಳಿಕ, ನಾಲ್ಕೆಂಟು ದಿವಸ ತಡೆದು, ನೀವು ಗುಂಡೇರಾಯನಾಗಿ ಬಂದು ಬಿಡಿರಿ. ಲಕ್ಷ ರೂಪಾಯಿಗಳ ಒಡೆಯರಾಗುವಿರಿ. ಈಗ ಸಾಲ ಕೊಟ್ಟಿದ್ದ ಸಾವುಕಾರರು ನಿಮ್ಮ ಮೇಲೆ ತಮ್ಮ ಹಕ್ಕನ್ನು ತೋರಿಸಲಾರದವರಾಗುವರು. ನೀವು ಸಾವುಕಾರರ ಹಾವಳಿಯಿಂದ ಪೂರಾ ಬಿಡುಗಡೆ ಹೊಂದುವಿರಿ. ನನ್ನ ಈ ಯುಕ್ತಿಯು ನಿಮ್ಮ ಮನಸ್ಸಿಗೆ ಬರುವದಿಲ್ಲವೆ?

ಬಂಡೇರಾಯ:—ಹಾ, ಈಗ ಹೊಳೆಯಿತು! ಶ್ರೇಷ್ಠವಾದ ಯುಕ್ತಿ! ಹೆಂಗಸರು ಬುದ್ಧಿಹೀನರೆಂದು ಕೆಲವರು ಅನ್ನುತ್ತಿದ್ದಾರೆ. ನಾನು ಅವರ ಅಭಿಪ್ರಾಯಕ್ಕೆ ಸಮ್ಮತಿಯನ್ನು ಕೊಡಲಾರೆನು. ನಿನ್ನ ಬುದ್ಧಿವಂತಿಕೆಯನ್ನು

ನೋಡಿದರೆ, ಅದು ಗಂಡಸರನ್ನೂ ನಾಚಿಸುವಂತಿದೆ! ಇಂತಹ ಹಂಚಿಕೆಯು ಗಂಡಸಾದ ನನಗೆ ಹೊಳೆಯುವ ಸಂಭವವಿತ್ತೆ? ನಾನು ಕೆಲವು ದಿವಸ ಕಾಣ ದಾಗಿ ಹೋಗಬೇಕು ಆಗ ನೀನು ನನ್ನ ಮರಣವನ್ನು ಪ್ರಕಟ ಮಾಡಿ, ಉತ್ತರ ಕ್ರಿಯೆಗಳನ್ನು ಕೊನೆಗಾಣಿಸಬೇಕು. ಬಳಿಕ ನಾನು ಕೆಲವು ದಿವಸ ತಡೆದು ವೇಷಾಂತರ ಮಾಡಿಕೊಂಡು ಇಲ್ಲಿಗೆ ಬರಬೇಕು. ನೀನು ಹೇಳಿದ್ದು ಇಷ್ಟೇ ಅಲ್ಲವೆ? ಆಗಲಿ, ನಾನಿದನ್ನು ಕಡೆಗಾಣಿಸಬಲ್ಲೆನು; ಆದರೆ ನಿನ್ನ ಗತಿಯೇನು?

ತಾರೆ:—ನನ್ನ ಸಲುವಾಗಿ ನೀವು ಚಿಂತಿಸುವ ಕಾರಣವಿಲ್ಲ.

ಬಂಡೇರಾಯ:—ಚಿಂತಿಸದಿದ್ದರೆ ಹೇಗೆ ನಡೆದೀತು? ನೀನು ವಿಧವೆ ಯಾಗುವೆ! ಸಮಾಜ ಶಾಸನ ದೃಷ್ಟಿಯಿಂದ ನನ್ನ ನಿನ್ನ ಬಿಡುಗಡೆಯಾಗಿ ಹೋಗುವದು!

ತಾರೆ:—ಕೇವಲ ಹುಚ್ಚರು! ಶುದ್ಧ ಶಂಭರು! ಏಕೆ, ಯಾಗೇಕೆ ಆಗ ಬೇಕು? ಪತಿ ಮರಣ ಶೋಕಗ್ರಸ್ತಳಾದ ದುಃಖಿನಿಯು ನಾನಾಗಿರುವೆನು. ಆ ಹೊತ್ತಿನಲ್ಲಿ ನೀವು ದಯಾಪರವಶರಾಗಿ ಪುನರ್ವಿವಾಹವನ್ನೇಕೆ ಮಾಡಿ ಕೊಳ್ಳಕೂಡದು? ಲಕ್ಷ ರೂಪಾಯಿಗಳ ಬೆಂಬಲವಿದ್ದ ಬಳಿಕ ಬೇಕಾದದ್ದನ್ನು ಮಾಡಿ ದಕ್ಕಿಸಿಕೊಳ್ಳಬಹುದು! ದುಡ್ಡಿನ ಬಲವು ಅಂತಿಂತಹದಲ್ಲ! ಈಗ ನೀವು ಸ್ವಲ್ಪೂ ಚಿಂತಿಸಕೂಡದು!

ಬಂಡೇರಾಯ:—ಆಗಲಿ, ನಿನ್ನ ಇಷ್ಟದಂತೆಯೆ ಆಗಲಿ. ಚದುರೆ ಯಾದ ನೀನು ಏನನ್ನಾದರೂ ಮಾಡಬಲ್ಲೆ. ನಾನೀಗ ಪ್ರತಿ ಮಾತಾಡ ಬಯ ಸುವದಿಲ್ಲ. ಇನ್ನು ನಾನು ಹೇಗೆ ಸಾಯಲೆಂಬದನ್ನಷ್ಟು ಹೇಳಿಕೊಡು.

ತಾರೆ:—ಅದಕ್ಕೇಕೆ ಚಿಂತೆ! ಸಾಯುವವಕ್ಕೆ ಹಲವು ಸಾಧನಗಳಿರು ವವು. ಬೇಕಾದರೆ ವಿಷ ತಿಂದು ಸಾಯಬಹುದು.

ಬಂಡೇರಾಯ:—ಪ್ರಿಯೆ, ನಾನೊಲ್ಲೆ! ವಿಷದ ಮಾತ್ತೆತ್ತಿದ ಕೂಡಲೆ ಮೈಯಲ್ಲಿ ಗದಗದ ನಡುಗು ಹುಟ್ಟಿತು! ವಿಷ ತಿಂದು ಸತ್ತರೆ, ನಾನು ಮತ್ತೆ ಬದುಕಿ ಬರುವ ಸಂಭವನೇ ಇಲ್ಲ! ಯಾಕಂದರೆ, ಅಪಘಾತ ಮರಣ. ದಹನ ಕ್ರಿಯೆಗೆ ಡಾಕ್ಟರರ ಸರ್ಟಿಫಿಕೇಟು ಬೇಕು. ನಿಜವಾಗಿ ಸತ್ತ ಹೊರತು,

ಡಾಕ್ಟರನು ಸರ್ಟಿಫಿಕೇಟು ಕೊಡಲಾರನು!

ತಾರೆ:—ಮೋಟಾರಿನ ಕೆಳಗೆ ಸಿಕ್ಕು ಸಾಯಬಹುದು.

ಬಂಡೇರಾಯ:—ಇದೂ ಮರೆಯಲ್ಲಿ ಆಗತಕ್ಕ ಕೆಲಸವಲ್ಲ. ನಿಜವಾಗಿ ಸತ್ತ ಹೊರತು, ನನ್ನ ಮರಣದ ಸರ್ಟಿಫಿಕೇಟು ದೊರೆಯದು. ಪೋಲೀಸ ಕೇಸಿನಲ್ಲಿ ಸಿಕ್ಕ ಮರಣವು ಸಿದ್ಧವಾದರೇನೇ ಜನರು ನಂಬುವರು; ಇಲ್ಲವಾದರೆ ನಮ್ಮ ಯುಕ್ತಿಯು ವ್ಯರ್ಥವಾಗುವದು.

ತಾರೆ:—ನೀರಲ್ಲಿ ಮುಳುಗಿ ಸಾಯಿರಿ!

ಬಂಡೇರಾಯ:—ಇದೇನೋ ತುಸ ಸುಲಭವಾಗಿ ತೋರುತ್ತಿದೆ; ಆದರೆ ಇಲ್ಲಿ ಸಮೀಪದಲ್ಲಿ ಅಂತಹ ಪ್ರವಾಹಗಳು ಯಾವವೂ ಇಲ್ಲವಲ್ಲ!

ತಾರೆ:—ಏನು ಮಾಡಬೇಕಿನ್ನು? (ಚಿಂತೆ ಮಾಡಿದಂತೆ ನಟಿಸಿ) ಹಾಸಿಗೆ ಯಲ್ಲಿ ವಲಗದಾಗಲೆ ಪ್ರಾಣ ಹೋದಂತೆ ನಟಿಸಿದರೆ ಹೇಗಾದೀತು?

ಬಂಡೇರಾಯ:—ಎಡಬಲಗಳ ಮನೆಗಳವರು ನನ್ನನ್ನು ಹೊತ್ತು ಕೊಂಡು ಹೋಗಿ ಸುಟ್ಟು ಬಂದ ಹೊರತು ಸಮಾಧಾನ ಹೊಂದರು.

ತಾರೆ:—ಇನ್ನೊಂದು ಯುಕ್ತಿಯನ್ನು ಹೇಳುವೆನು ಕೇಳಿರಿ. ನೀವೂ ಕೆಂಚನೂ ಕೂಡಿ ಪ್ರವಾಸಕ್ಕೆ ಹೊರಡಿರಿ. ಕೆಲವು ದಿವಸಗಳ ಮೇಲೆ ಕೆಂಚನು ನಿಮ್ಮ ಸಾಮಾನುಗಳನ್ನೆಲ್ಲ ತಕ್ಕೊಂಡು ತಿರುಗಿ ಬಂದು, ರಾಯರು ರೇಲ್ವೆಯ ಹಳಿಯಲ್ಲಿ ಸಿಕ್ಕರೆಂದು ಸುದ್ದಿಯನ್ನು ಹುಟ್ಟಿಸಲಿ! ದೂರ ದೇಶದಲ್ಲಿ ಈ ಸಂಗತಿ ನಡೆಯಿತೆಂದು ಹೇಳಿಬಿಟ್ಟರೆ, ಜನರು ಸ್ಪಚ್ಛಾಸ್ಪಚ್ಛೆ ಮಾಡುವ ದನ್ನು ಬಿಟ್ಟುಬಿಡುತ್ತಾರೆ.

ಬಂಡೇ:—ಕೆಂಚನನ್ನು ಈ ಒಳಸಂಚಿನಲ್ಲಿ ಸೇರಿಸಿಕೊಳ್ಳ ಕೂಡದು! ಈ ಮಾತು ನಮ್ಮಿಬ್ಬರಲ್ಲಿಯೆ ಅಬದ್ಧವಾಗಿರಲಿ! ಮೂವರ ಕಿವಿಗಳಿಗೆ ಮುಟ್ಟಿದ ಮಾತು ಮೂಲೋಕಗಳಲ್ಲೆಲ್ಲ ಹರಡುವದೆಂಬ ಮಾತನ್ನು ನೀನು ಕೇಳಿಲ್ಲವೆ? ಕೆಂಚನು ವಿಶ್ವಾಸುಕ ಸೇವಕನಾದರೂ ಬುದ್ಧಿಹೀನನು. ಅವನ ಬಾಯಿ ಯಿಂದ ಯಾವ ಕಾಲಕ್ಕೆ ಯಾವ ಮಾತು ಹೊರಟೀತೆಂಬದರ ನಿಯಮವಿಲ್ಲ. ನಾವು ಯಾರ ಹಂಗಿನಲ್ಲಿ ಸಿಗುವದೂ ಬೇಡ.

ತಾರೆ:—ಹೀಗಿದ್ದರೆ ಇನ್ನೊಂದು ಹಂಚಿಕೆಯನ್ನು ಹೇಳುವೆನು ಕೇಳಿರಿ

ಶಿವರಾತ್ರಿಯು ಸಮೀಪಿಸಿದೆ. ಶಿವರಾತ್ರಿಯ ನೆವ ಮಾಡಿಕೊಂಡು ನಾವು ತುಂಗಾನದಿಯ ಸ್ನಾನಕ್ಕೆ ಹೋಗೋಣ. ಇಬ್ಬರೂ ನದಿಗೆ ಹೋದಾಗ ನೀವು ಈಸ ಬಿದ್ದು ಪಾರಾಗಿ ಹೋಗಿಬಿಡಿರಿ. ನಾನು ಎದೆ ಎದೆ ಬಡಕೊಳ್ಳುತ್ತ ನಿಮ್ಮ ಮರಣವಾರ್ತೆಯನ್ನು ಜಾಹೀರ ಪಡಿಸಿ ಬಿಡುವೆನು. ಕೂಡಿದ ಜನರೆಲ್ಲರು ನನ್ನ ಮಾತನ್ನು ನಂಬಿ, ನಿಮ್ಮ ಮರಣಕ್ಕೆ ಸಾಕ್ಷಿಗಳಾಗುವರು. ಹೆಣವು ಸಿಗದಿದ್ದರೂ ಚಿಂತೆಯಿಲ್ಲ. ಮರಣದ ವಿಷಯಕ್ಕೆ ಜನರ ಸಂದೇಹವುಂಟಾಗದು!

ಬಂಡೇರಾಯ:—ಹೀಗೆ ಮಾಡಲಿಕ್ಕೆ ಏನೂ ಅಡ್ಡಿಯಿಲ್ಲ. ಪ್ರಿಯೆ, ನಿನ್ನನ್ನು ಎಷ್ಟು ವರ್ಣಿಸಿದರೂ ಸಾಲದು! ನಿಜವಾಗಿಯೂ ನೀನು ಮಹಾ ಬುದ್ಧಿಮತಿಯು! ನಿನ್ನಿಂದಲೇ ಅಭಾವಗ್ರಸ್ತನಾದ ನನ್ನ ಈ ಬಾಳುವೆಯು ಸುಸೂತ್ರವಾಗಿ ಸಾಗಿದೆಯೆಂಬುದರಲ್ಲಿ ಸಂದೇಹವಿಲ್ಲ.

ತಾರೆ:—ಈಗ ಈ ವರ್ಣನೆಯು ನನಗೆ ಬೇಕಿಲ್ಲ. ನಾನು ಹೇಳಿದಂತೆ ಕೆಲಸ ಮಾಡಿ ತೋರಿಸಿರಿ. ನೀವು ಈ ನಾಟಕದಲ್ಲಿ ಅಭಿನಯ ನಿಪುಣತೆಯನ್ನು ಚನ್ನಾಗಿ ತೋರಲಿಕ್ಕೆ ಬೇಕು. ಜನರಿಗೆ ಸ್ವಲ್ಪ ಸಹ ಸಂಶಯ ಬರಕೂಡದು!

ಬಂಡೇರಾಯ:—ಇದು ನನ್ನಿಂದ ಹೇಗೆ ಆಗಬೇಕು? ನಾನು ನಾಟಕದಲ್ಲಿ ಎಂದೂ ಸೋಗು ಹಾಕಿದವನಲ್ಲ!

ತಾರೆ:—ಹಾಕದಿದ್ದರೇನಾಯಿತು? ಈ ಹೊತ್ತಿನಲ್ಲಿ ನೀವು ನಿಮ್ಮ ಬುದ್ಧಿವಂತಿಕೆಯನ್ನು ತೋರಿಸಲೇಬೇಕು? ಲಕ್ಷ ರೂಪಾಯಿಗಳೇನು ಹಾದಿಯ ಮೇಲೆ ಬಿದ್ದಿರುವವೆ? ಲಕ್ಷ ರೂಪಾಯಿಗಳಿಗಾಗಿ ಏನನ್ನಾದರೂ ಮಾಡಲಿಕ್ಕೆ ಸಿದ್ಧರಾಗಬೇಕು!

ಬಂಡೇರಾಯ:—ನಿಜವೆ! ಒಲ್ಲೆನೆಂದರೆ ನಡೆಯದು! ಲಕ್ಷ ರೂಪಾಯಿಗಳು! ಇವು ನನಗೆ ಸಿಗುವವು! ನಾನು ಲಕ್ಷ ರೂಪಾಯಿಗಳ ಖಾವಿಂದನಾಗುವೆನು! ಸಾಲ ಕೊಟ್ಟವರ ಉಪಟಳಕ್ಕೆ ಬೇಸತ್ತು ಅಜ್ಞಾತವಾಸದಲ್ಲಿ ಕಾಲಕಳೆಯುತ್ತಿದ್ದ ನಾನು, ಲಕ್ಷ ರೂಪಾಯಿಗಳ ಒಡೆಯನಾಗಿ ಲಕ್ಷ್ಮೀಪತಿಯಾಗುವೆನು! ಆಗಿನ ನನ್ನ ಸೊಬಗನ್ನು ಎಷ್ಟೆಂತ ಹೇಳಲಿ?

(ಹುಚ್ಚನಂತೆ ಕುಣಿದಾಡಹತ್ತುವನು.)

**ತಾರೆ:**—ಇದೇನು? ಪುತ್ತೆ ಹುಡುಗಾಟವನ್ನು ಪ್ರಾರಂಭ ಮಾಡಿದಿ ರಲ್ಲ! ಬಿಡಿರಿ! ನನಗೆ ನಿಮ್ಮ ಈ ವೃತ್ತಿಯು ಸೇರುವದಿಲ್ಲ. ಇನ್ನೂ ನಿಮಗೆ ಹಲವು ಸಂಗತಿಗಳನ್ನು ತಿಳಿಸಿ ಕೊಡಬೇಕಾಗಿದೆ. ಮೊದಲು ಉಪಾಹಾರ ವನ್ನು ತಕ್ಕೊಂಡು ಶಾಂತರಾಗಿರಿ. ಬಳಿಕ ಉಪದೇಶವನ್ನು ಹೇಳಿಕೊಡುವೆನು

**ಬಂಡೇರಾಯ:**—ಪ್ರಿಯೆ, ಹಾಗೆ ಆಗಲಿ, ನಡೆ ಹೋಗೋಣ.

(ಇಬ್ಬರೂ ಹೋಗುವರು)

# ೨ನೇ ಅಂಕ.

## ಮೊದಲನೆಯ ಪ್ರವೇಶ.

(ಸ್ಥಳ ಬಂಡೇರಾಯನ ಮನೆಯ ಮುಂದಿನ ಬೀದಿ. ಸಾವುಕಾರರು ಪ್ರವೇಶಿಸುವರು.)

೧ನೆಯವ:—ಅಯ್ಯೋ! ಸತ್ತೇ ಹೋದನೆ? ಇನ್ನೇನ ಮಾಡಬೇಕಪ್ಪಾ? ಹಾಳಾಗಿ ಹೋಯಿತು!

೨ನೆಯವ:—ಇನ್ನು ನಮ್ಮ ಹಣವು ಹೇಗೆ ವಸೂಲಾಗಬೇಕು? ನಾವು ನಮ್ಮ ಧನವನ್ನು ಹೊಳೆಯಲ್ಲಿ ಚಲ್ಲಿ ಕೊಟ್ಟಂತಾಯ್ತು!

೩ನೆಯವ:--ಅದೇಕೆ? ನಮ್ಮ ಬಾಕಿಗೇನೂ ಸಾವಿಲ್ಲ! ಲಕ್ಷ ರೂಪಾಯಿಗಳಿವೆಯಲ್ಲ!

೪ನೆಯವ:—ಊಹು! ಲಕ್ಷ ರೂಪಾಯಿಗಳು ಬಂಡೇರಾಯರವಲ್ಲ; ಗುಂಡೇರಾಯರವು! ಬಂಡೇರಾಯರು ತಮ್ಮ ಜೀವಮಾನದ ವರೆಗೆ ಆ ಲಕ್ಷ ರೂಪಾಯಿಗಳ ಬಡ್ಡಿಯನ್ನು ಮಾತ್ರ ಹೊಂದಬೇಕಿತ್ತು........

೨ನೆಯವ:—ಈ ಮನೆಯಿದೆಯಲ್ಲ ನಾವೆಲ್ಲರೂ ಕೂಡಿ ದಾವೆ ಮಾಡೋಣ. ಈ ಮನೆಯ ಮೇಲೆ ಜಪ್ತಿ ಹುಕುಮು ತರೋಣ. ಬಳಿಕ ಮನೆಯನ್ನು ಲಿಲಾವ ಮಾಡಿಸಿ ನಮ್ಮ ಹಣವನ್ನು ಪೇಡ ಮಾಡಿಕೊಳ್ಳೋಣ.

೧ನೆಯವ:—ಹೀಗಾಗುವಂತಿಲ್ಲವಪ್ಪಾ! ಈ ಮನೆಯು ಬಂಡೇರಾಯರ ಹೆಂಡತಿಯ ಹೆಸರಿನಿಂದಿರುವದು! ಸ್ತ್ರೀಧನವಾದ ಇದರ ಮೇಲೆ ನಮ್ಮ ಹಕ್ಕು ನಡೆಯದು!

೪ನೆಯವ:--ನಮ್ಮ ಹಣೇಬರಹವು ಕೆಟ್ಟದ್ದೆನ್ನಬೇಕು! ಇಲ್ಲವಾದರೆ ಬಂಡೇರಾಯನು ಸಾಯುತ್ತಿದ್ದನೇಕೆ? ಕಡೆತನಕ ಸಾಲ ಮಾಡಿ ಮಾಡಿ ಹೊಟ್ಟೆ ಹೊರೆದು ಸತ್ತು ಹೋದನು. ಆ ಮುಂಡೇಮಗನು ಇನ್ನೆರಡು ದಿವಸ ಬದುಕಿದ್ದರೆ, ತಾನೂ ಸುಖಬಡುತ್ತಿದ್ದನು; ನಮಗೂ ಸಂತೋಷ ವಾಗುತ್ತಿತ್ತು!

೨ನೆಯವ:--ಆಶ್ಚರ್ಯಕರವಾದ ಮರಣವದು! ಪರ್ವಣಿಯಲ್ಲಿ ತುಂಗಭದ್ರೆಯ ಸ್ನಾನಕ್ಕೆ ಹೋಗಿ ನದಿಯಲ್ಲಿ ಈಸುತ್ತಿರುವಾಗ ನೀರಲ್ಲಿ ಮುಳುಗಿ

ಸಾಯುವದೆಂದರೆ, ಸೋಜಿಗದ ಸಂಗತಿಯೇ ಸರಿ! ಈಸಬಲ್ಲವನು ನದಿಯಲ್ಲಿ ಮುಳುಗಿದ್ದು ಹೇಗೆ? ಸತ್ತದ್ದು ಹೇಗೆ? ಎಲ್ಲವೂ ವಿಚಿತ್ರವೆ!

೩ನೆಯವ:—ಇನ್ನು ಆ ಲಕ್ಷ ರೂಪಾಯಿಗಳು ಯಾರಿಗೆ ಸಿಗುವವು? ನಾವು ಅದರ ಮೇಲೆ ಕೆಲಸ ನಡಿಸಲಿಕ್ಕಾಗದೆ?

೧ನೆಯವ:—ಇಲ್ಲ. ಆ ಲಕ್ಷ ರೂಪಾಯಿಗಳ ಮೇಲೆ ಬಂಡೇರಾಯರ ಹಕ್ಕು ಇಲ್ಲ. ಅಂದ ಬಳಿಕ ಅವು ನಮಗೆ ಸಿಗುವ ಸಂಭವವಿಲ್ಲ. ನಾವು ಮುಳುಗಿ ಹೋದೆವು. ಇನ್ನು ಆ ಹಣವು ಯಾರಿಗೆ ಸಿಕ್ಕ ಭಾಗ್ಯವು ನಮಗೇನು?

೨ನೆಯವ:—ಅಯ್ಯೋ! ರಂಡೇಮಗನೆ! ನದಿಯ ಸ್ನಾನಕ್ಕೋಸುಗ ಏಕೆ ಹೋದೆ? ಹೋದರೂ ಈಸಬಿದ್ದಿಯೇಕೆ? ಮುಳುಗಿದೆಯೇಕೆ? ಸತ್ತೆ ಯೇಕೆ? ನೀನೊಬ್ಬನೇ ಮುಳುಗಲಿಲ್ಲ. ನಮ್ಮನ್ನೂ ಮುಳುಗಿಸಿದೆ! ನೀನೊ ಬ್ಬನೇ ಸಾಯಲಿಲ್ಲ! ನಮ್ಮನ್ನೂ ಸಾಯಹೊಡದೆ! ಎಂತಹ ದುಷ್ಟನಪ್ಪಾ ನೀನು! ಸಾಯುವಾಗಲಾದರೂ ಧರ್ಮಾಧರ್ಮಗಳ ವಿಚಾರವನ್ನು ಮನ ದಂದು, ನಮ್ಮನ್ನು ನೆನಿಸಬಾರದಿತ್ತೆ? (ಕೆಂಚನು ಬರುವನು)

ಕೆಂಚ:--ಏನಿರಪ್ಪಾ ಸಾಹುಕಾರರೆ, ಮತ್ತೇಕೆ ಬಂದಿರಿ? ಬಾಕಿಯ ವಸೂಲಿಗೆ ಆಗಮಿಸಿರುವಿರೋ? ಇನ್ನು ನಿಮ್ಮ ಹಣವು ನಿಮ್ಮ ಕೈಸೇರ ಬೇಕಾದರೆ, ನೀವು ಬೇರೆ ಸ್ಥಳಕ್ಕೆ ಹೋಗಬೇಕು! ನಮ್ಮ ಒಡೆಯರು ಪ್ರಯಾಣ ಬೆಳಿಸಿದ್ದ ಲೋಕಾಂತರವನ್ನು ಸೇರಿ, ನೀವು ನಿಮ್ಮ ಕಣವನ್ನು ವಸೂಲ ಮಾಡಿಕೊಳ್ಳಬೇಕು! ಸಿದ್ಧರಿರುವಿರಾ? (ಎಲ್ಲರೂ ಒಬ್ಬರೊಬ್ಬರ ಮೋರೆ ಯನ್ನು ನೋಡತೊಡಗುವರು.) ಆಗದು! ನಿಮ್ಮಿಂದ ಈ ಕಾರ್ಯವಾಗದು! ನಿರ ರ್ಥಕವಾಗಿ ಇಲ್ಲಿ ನಿಂತು ಗಲಭೆಯನ್ನೇಕೆ ನಡಿಸಿರುವಿರಿ? ದಯಮಾಡಿಸಿರಿ. ನೀವು ನಿಮ್ಮ ಕಟಿಕಟಿಯಿಂದ ಗಟ್ಟಿಮುಟ್ಟಯಾಗಿದ್ದ ಒಬ್ಬ ಮನುಷ್ಯನನ್ನು ಬಲಿಗೊಂಡಿರಿ! ಸಾಲದೇನು? ಇನ್ನೂ ನಿಮ್ಮ ಮನಸ್ಸು ತಣಿಯಲೊಲ್ಲದೇನು? ಶಕ್ತಿಶಾಲಿಗಳಾದ ಮಹಾತ್ಮರೆ, ಇನ್ನು ಸಾಕು! ದಯವಿಟ್ಟು ಇನ್ನು ನೀವು ನಿಮ್ಮ ನಿಮ್ಮ ಮನೆಗಳಿಗೆ ಪ್ರಯಾಣ ಬೆಳಿಸಿರಿ. ಕೆಲವು ದಿನಗಳ ಮಟ್ಟಿಗಾ ದರೂ ಶಾಂತಚಿತ್ತರಾಗಿರಿ!

೧ನೆಯವ:—ಇನ್ನು ಇಲ್ಲಿ ನಿಲ್ಲುವದರಿಂದ ಪ್ರಯೋಜನವಿಲ್ಲ! ನಾವೆಲ್ಲರೂ ಹೋಗೋಣ ಬನ್ನಿರಿ!

೨ನೆಯವ:—ನಾವೇನೂ ಇಲ್ಲಿ ಇರಬಂದವರಲ್ಲ! ಹೋಗಿಯೇಹೋಗುವೆವು! ರಾಯರ ವಿಪತ್ತಿನ ಸಂಗತಿಯನ್ನು ಕೇಳಿ ನಿಜವಾದ ಸುದ್ದಿಯನ್ನು ತಿಳಕೊಳ್ಳಲಿಕ್ಕೆ ಬಂದಿದ್ದೆವು. ತಿಳಕೊಂಡು ಹೋಗೋಣ.

೩ನೆಯವ:—ಏನಪ್ಪಾ, ಇನ್ನು ಆ ಹಿಂದಿನದನ್ನು ಮರೆದುಬಿಡು. ಸರಿಯಾಗಿ ನಮ್ಮೊಡನೆ ಮಾತಾಡು.

೨ನೆಯವ:—ಏನಪ್ಪಾ, ನಾವು ನಿನಗೊಂದು ಮಾತ ಕೇಳುತ್ತೇವೆ; ಅದಕ್ಕೆ ಸತ್ಯವಾದ ಉತ್ತರವನ್ನು ಹೇಳುವೆಯಾ?

ಕೆಂಚ:—ಲಕ್ಷ್ಮೀಪುತ್ರರೇ, ನಾನಿದುವರೆಗೆ ಮಾತಾಡುತ್ತ ಬಂದದ್ದೆಲ್ಲ ಅಯೋಗ್ಯವೂ ಅಸತ್ಯವೂ ಎಂದು ನಿಮ್ಮ ಭಾವನೆಯೇನು? ಹೀಗಿದ್ದರೆ, ನಾನು ನಿಮ್ಮೊಡನೆ ಮಾತನಾಡುವದೇ ಇಲ್ಲ! ನಾನೇನೋ ಸದಾ ಸತ್ಯವನ್ನೇ ಮಾತಾಡುತ್ತ ಬಂದಿದ್ದೇನೆ. ಅದು ನಿಮಗೆ ಅಸತ್ಯವಾಗಿ ಕಂಡರೆ, ನಾನೇನು ಮಾಡಲಿ! ನೀವೇ ಹೇಳಿರಿ! ಹೆರವರ ಹತ್ತರಿದ್ದ ದಿಟವು ನಿಮ್ಮ ಬಳಿಗೆ ಬರುತ್ತಲೆ ಸಟೆಯಾಗಿ ಪರಿಣಮಿಸುವದಾದರೆ, ನೀವು ಅನ್ಯರ ಕೂಡ ಮಾತಾಡದಿರುವುದೇ ಒಳ್ಳೇದು!

೨ನೆಯವ:—ಹಾಗೇನೂ ಇಲ್ಲವಪ್ಪಾ! ನೀನು ಸದಾ ನಿಜವಿದ್ದುದನ್ನೇ ನುಡಿಯುತಕ್ಕವನು! ಅಂತೆಯೇ ನಾವೀಗ ನಿನ್ನಿಂದ ನಿಜ ಸಂಗತಿಯನ್ನು ತಿಳಕೊಳ್ಳಲಿಕ್ಕೆ ನಿನ್ನನ್ನು ಹುಡುಕುತ್ತಿದ್ದೆವು. ಅನಾಯಾಸವಾಗಿ ನೀನೇ ಹೊರಗೆ ಬಂದು ಬಿಟ್ಟೆ; ಒಳ್ಳೇದಾಯಿತು! ನಿಮ್ಮ ಒಡೆಯನು ಸತ್ತದ್ದು ನಿಜವೋ ಸುಳ್ಳೋ? ನೀನು ಅಂದು ನಮ್ಮ ಮುಂದೆ ನಿನ್ನ ಯಜಮಾನನು ಮುತ್ತುಗಳ ಖರೀದಿಗೆ ರಾಮೇಶ್ವರಕ್ಕೆ ಹೋಗಿದ್ದಾನೆಂದು ಹೇಳಲಿಲ್ಲವೆ?........

ಕೆಂಚ:—ಧನಿಯರೇ, ಇನ್ನು ಆ ಮಾತಿನಿಂದ ಪ್ರಯೋಜನವೇನು? ಹಲವು ವ್ಯಾಪಾರಗಳಲ್ಲಿ ದಂಗಾಗಿದ್ದ ನನ್ನ ಧನಿಯರು ಇಂದು ಸತ್ತು ಸ್ವರ್ಗದಲ್ಲಿರುವರು! ಹಿಂದಿನದನ್ನು ನೆನಿಸುತ್ತ ಹಿತ್ತಲದಲ್ಲಿ ಅಳುತ್ತ ಕುಳ್ಳಿರುವದರಲ್ಲಿ ಉಪಯೋಗವೇನು?

ಗನೆಯುವ:—ತುಂಗಭದ್ರೆಯಲ್ಲಿ ಮುಳುಗಿ ಸತ್ತದ್ದು ನಿಜವೊ? ಅಥವಾ ಕೋಚೀನದ ಕಡೆಗೆ ಕೊಬ್ಬರಿ ಎಣ್ಣೆಯ ಕೊಳ್ಳಲಿಕ್ಕೆ ಹೋದ ಸಂಗತಿಯಂತೆ ಇದೂ ಒಂದು ಜಾಲ ವ್ಯಾಪಾರವೆ?

ಕೆಂಚ:—ನನ್ನ ಮಾತಿನಲ್ಲಿ ನಿಮಗೆ ನಂಬಿಗೆಯುಂಟಾಗಲೊಲ್ಲದೇನು? ಹೀಗಿದ್ದರೆ ನೆಟ್ಟಗೆ ತುಂಗಭದ್ರೆಗೆ ಹೋಗಿರಿ. ಹುಡುಕಿರಿ. ನದಿಯಲ್ಲಿ ಈಸ ಬಿದ್ದು ದಣಿಯುವ ವರಿಗೆ ಶೋಧ ಮಾಡಿರಿ. ಕೈ ಸೋಲುತ್ತಲೆ, ಮುಳುಗಿ ಹೋಗಿರಿ. ಹೀಗೆ ಮಾಡುವದರಿಂದ ಅಲ್ಪಾವಕಾಶದಲ್ಲಿಯೆ ನೀವು ನಿಜ ಸಂಗತಿಯನ್ನು ಕಂಡುಕೊಳ್ಳುವಿರಿ!

ಗನೆಯುವ:—ನಿಜವಾಗಿಯೂ ರಾಯರು ಸತ್ತಿರುವರೆ?

ಕೆಂಚ:—ಇನ್ನೂ ನಿಮಗೆ ಸಂದೇಹವಿದೆಯೇನು? ಅಯ್ಯೋ, ಮಹಾ ರಾಯರೇ! ನಿಮ್ಮ ಕಟಕಟೆಯ ಪೇಚಿನಲ್ಲಿ ಸಿಕ್ಕ ಅವರು, ಬದುಕಿರುವ ಸಂಭ ವವುಂಟೆ? ನೀವು ಅವರನ್ನು ಬದುಕಗೊಟ್ಟೀರಾ? ನಿಮ್ಮ ಜಾಲದಲ್ಲಿ ಸಿಕ್ಕವರಿಗೆ ಸಾಯುವದಕ್ಕೆ ತುಂಗಭದ್ರೆಯೇಕೆ? ಮೊಳಕಾಲಮಟ ಕೆಸರಾದರೂ ಸಾಕು. ಅವರು ನಿಮ್ಮಿಂದ ಪಾರಾಗುವದಕ್ಕೋಸ್ಕರ ಆ ಕೆಸರಲ್ಲಿಯೇ ಆನಂದದಿಂದ ಪ್ರಾಣ ಕೊಡುವರು!

(ಎಲ್ಲರೂ ಹೋಗುವರು.)

---

## ೨ನೇಯ ಪ್ರವೇಶ.

(ತಾರೆಯೂ ವಸ್ತ್ರಾವೃತನಾದ ಬಂಡೇರಾಯನೂ ಬರುವರು)

ಬಂಡೇರಾಯ:—ಪ್ರಿಯೆ, ಇನ್ನು ಆ ಸ್ಥಳದಲ್ಲಿ ಅಡಗಿರಲಾರೆನು. ದಿನದ ಇಪ್ಪತ್ತುನಾಲ್ಕು ತಾಸುಗಳನ್ನು ಆ ಏಕಾಂತಸ್ಥಳದಲ್ಲಿ ಏಕಾಂಗಿಯಾಗಿದ್ದು ಕಳೆವುದು ತುಂಬ ಕಠಿಣ. ಹೊಲಸು ವಾಸನೆ, ಹುಳ-ಹುಪ್ಪಡಿಗಳ ಕಾಟ ಮೊದಲಾದವುಗಳಿಂದ ನಾನು ಬೇಸತ್ತು ಹೋಗಿದ್ದೇನೆ.

ತಾರೆ:—ಹೀಗೆಂದರೆ ಹೇಗೆ? ಮನುಷ್ಯನು ಪ್ರಸಂಗವಿಶೇಷದಲ್ಲಿ ಎಂತಹ ಕಷ್ಟವನ್ನಾದರೂ ಆನಂದದಿಂದ ಸಹಿಸಲಿಕ್ಕೆ ಸಿದ್ಧನಾಗಬೇಕು! ಪ್ರಿಯಾ,

ನಾನೇನು ಒಳ್ಳೇ ಆರಾಮದಲ್ಲಿರುವೆನೆಂದು ತಿಳಿದಿರುವಿರಾ? ಸಧವೆಯಾಗಿಯೂ ವಿಧವೆಯಂತೆ ನಟಿಸುವದು ಎಂತಹ ಕಠಿಣ ಹೋರೆಯೆಂಬುದನ್ನು ಆಲೋಚಿಸಿರಿ. ಈ ಅಭಿನಯವು ನನಗೆ ಸಾಕು ಸಾಕಾಗಿ ಹೋಗಿದೆ! ಆದರೆ ನಿರ್ವಾಹವಿಲ್ಲದಾಗಿದೆ. ಹೂಡಿದ ನಾಟಕವನ್ನು ಬೊಬ್ಬಾಟವಾಗದಂತೆ ಕೊನೆಗಾಣಿಸಬೇಕಾಗಿದೆ. ಇದರಲ್ಲಿ ನಾನಾಗಲಿ, ನೀವಾಗಲಿ ದೀವಾಳೆ ತೆಗೆದು ಉಪಯೋಗವಿಲ್ಲ. ಭವಿಷ್ಯತ್ಕಾಲದ ಹಿತವನ್ನು ಚಿಂತಿಸಿ, ಈಗಾಗುತ್ತಿರುವ ತಾಪಗಳನ್ನು ನುಂಗಿಕೊಳ್ಳಲಿಕ್ಕೆ ಬೇಕು.

ಬಂಡೇರಾಯ:—ಪ್ರಿಯೆ, ಆ ಕೋಣೆಯ ಮೂಲೆಯಲ್ಲಿ ಹೊಲಸು ನಾತವನ್ನು ಕುಡಿಯುತ್ತ, ಹುಳ-ಹುಪ್ಪಡಿಗಳ ಕಡಿತವನ್ನು ತಡಕೊಳ್ಳುತ್ತ ಇನ್ನೆಷ್ಟು ದಿವಸ ಇರಬೇಕು?

ತಾರೆ:— ಇನ್ನು ಬಹಳ ದಿವಸ ಇರುವ ಕಾರಣವಿಲ್ಲ. ಶ್ರಾದ್ಧದ ಕೆಲಸವು ತೀರಿಹೋಗಿದೆ. ಜನರೆಲ್ಲರೂ ನೀವು ಸತ್ತುಹೋದುದು ನಿಜವೆಂದು ನಂಬಿದ್ದಾರೆ. ನಾವು ಮಾಡಿದ ಹಂಚಿಕೆಯು ಸಂಪೂರ್ಣ ರೀತಿಯಿಂದ ಸಫಲವಾಗುವದರಲ್ಲಿದೆ.

ಬಂಡೇರಾಯ:—ಹೀಗಿದ್ದರೆ ತಡವೇಕೆ? ನಾನು ಇಂದೇ ಗುಂಡೇರಾಯನ ವೇಷದಲ್ಲಿ ಏಕೆ ಪ್ರಕಟನಾಗಬಾರದು?

ತಾರೆ: —ಹೀಗೆ ಉತಾವಳಿತನವನ್ನು ತೋರಬೇಡಿರಿ. ತುಸ ತಡೆಯಿರಿ. ಈಗ ನೀವು ಒಂದು ಪತ್ರವನ್ನು ಬರೆದುಕೊಡಿರಿ. ಅದನ್ನು ಗೌಪ್ಯವಾಗಿ ಪೋಸ್ಟಿನಲ್ಲಿ ಚಲ್ಲಿಸುವೆನು. ಅದು ತಿರುಗಿ ನನಗೆ ಪೋಷ್ಟಮನ್ನನಿಂದ ಮುಟ್ಟಿದ ಬಳಿಕ ನಾನು ಜನರಲ್ಲಿ ಸುದ್ದಿಯನ್ನು ಹರಡುವೆನು. ತರುವಾಯ ನೀವು ಪ್ರಕಟರಾಗಿರಿ. ಓಹೊ! ಯಾರೋ ಬರುವ ಸಪ್ಪಳವಾಗುತ್ತಿದೆ. ನೀವಿನ್ನು ಹೋಗಿರಿ. ಅಡಗಿಕೊಂಡು ಕುಳಿತುಕೊಳ್ಳಿರಿ. ನಾನು ಕಾಗದ-ಲೆಕ್ಕಣಿಕೆಗಳನ್ನು ತಂದು ಕೊಡುವೆನು. ಇನ್ನು ಇಲ್ಲಿ ನಿಲ್ಲಬೇಡಿರಿ. ಬೇಗನೆ ಓಡಿ ಹೋಗಿರಿ. (ತಾರೆಯು ಪತಿಯನ್ನು ದಬ್ಬುವಳು ಪರಿಚಾರಿಕೆಯು ತಿಕ್ಕಿದ ಪಾತ್ರಗಳನ್ನು ತಕ್ಕೊಂಡು ಪ್ರವೇಶಿಸುವಳು. ಬಂಡೇರಾಯನನ್ನು ನೋಡುವಳು. ಬಂಡೇರಾಯನು ಓಡಿ ಹೋಗುವನು, ಪರಿಚಾರಿಕೆಯು ಗಾಬರಿಯಾಗಿ ಕೈಯೊಳಗಿನ

ಪಾತ್ರೆಗಳನ್ನು ಒಗೆದು ಗದ ಗದನೆ ನಡಗುತ್ತ ನಿಲ್ಲುವಳು. ತಾರೆಯು ಅವಳ ಹತ್ತಿರ ಬರುವಳು.)

ತಾರೆ:—ಯಾಕೆ? ಏನಾಯಿತು? ಹೀಗೇಕೆ ಮಾಡುತ್ತಿರುವೆ?

ಪರಿ:—ಒ ಡ-ತಿ-ಯ-ರೆ (ಮತ್ತಷ್ಟು ನಡುಗುವಳು.)

ತಾರೆ:—ಹೀಗೇಕೆ? ಆದದ್ದಾದರೂ ಏನು?

ಪರಿ:—ತುಸ ತಡೆಯಿರಿ. ಮೈಯಲ್ಲಿ ನಡುಗು ಹುಟ್ಟಿದೆ! ಹಲ್ಲು ಕಟ ಕರಿಸುತ್ತಿವೆ!

ತಾರೆ:—ಏನಾಯಿತೆಂಬದನ್ನು ಹೇಳದೆ ಹೀಗೆ ಮಾಡಿದರೇನು? ಇದ ರಿಂದ ನನಗೇನು ಹೊಳೆಯಬೇಕು? ಹೀಗೇಕೆ ಕಂಪಿಸುತ್ತಿರುವೆ?

ಪರಿ:—ಯ-ಜ-ಮಾ-ನ-ರು............

ತಾರೆ (ವಿಚಲಿತಳಾಗಿ):—ಹೀಗೆಂದರೇನು? ಚೆನ್ನಾಗಿ ಮಾತಾಡು. ಇಲ್ಲ ದ್ದೊಂದು ಬಡಬಡಿಸಬೇಡ!

ಪರಿ:—ಒಡತಿಯರೆ, ನಾನು ಸುಳ್ಳಾಡತಕ್ಕವಳಲ್ಲ! ನಿಮ್ಮ ಮುಂದೆ ನಾನೆಂದಾದರೂ ಸುಳ್ಳು ಹೇಳೇನೆ? ನಿಜವಾಗಿಯೂ ಯಜಮಾನರು—

ತಾರೆ:—ಕೇವಲ "ಯಜಮಾನರು," ಎಂದಂದು ಸುಮ್ಮನಾದರೆ ನನ ಗೇನು ಹೊಳೆಯಬೇಕು. ಮುಂದೇನಾಯಿತೆಂಬದನ್ನು ಹೇಳು.

ಪರಿ:—ಒಡತಿಯರೆ, ನಾನು ಸತ್ಯವನ್ನೇ ನುಡಿಯುವೆನು. ನಾನು ಪಾತ್ರೆಗಳನ್ನು ಉಜ್ಜಿಕೊಂಡು ಬರುತ್ತಿದ್ದೆನು. ಅಲ್ಲಿ ಯಜಮಾನರು ನಿಂತಿ ದ್ದರು. ಹಚ್ಚಡವನ್ನು ಹೊತ್ತಿದ್ದರು. ಮೋರೆಯೊಂದು ಮಾತ್ರ ಕಾಣಿಸಿತು. ನಾನು ದಿಟ್ಟಿಸಿ ನೋಡಿದೆನು. ಅವರ ಒಳಸೇರಿದ ಕಣ್ಣುಗಳನ್ನೂ, ವಿಕೃತ ವಾದ ಮುಖವನ್ನೂ ನೋಡಿ ನನಗೆ ಬಹು ಭಯವುಂಟಾಯಿತು. ಗದಗದನೆ ನಡುಗು ಹುಟ್ಟಿತು. ಬೇಕಾದರೆ ಮೈಮೇಲೆ ಕೈಯಾಡಿಸಿ ನೋಡಿರಿ. ಇನ್ನೂ ನನ್ನ ನಡುಗು ಹೋಗಲೊಲ್ಲದು. ನಾನು ಅಂಥಿಂಥದಕ್ಕೆ ಹೆದರತಕ್ಕವಳಲ್ಲ. ನಾನು ಚಿಕ್ಕಂದಿನಿಂದ ಬಹು ದಿವಸ ಹಳ್ಳಿಯಲ್ಲಿದ್ದು, ಹಗಲು-ರಾತ್ರಿಯನ್ನದೆ ಕಂಡಕಂಡಲ್ಲಿ ತಿರುಗಾಡಿದವಳು; ಆದರೂ ಇಂದಿನ ನೋಟವನ್ನು ನೋಡಿ ನನಗೆ ಬಹಳ ಹೆದರಿಕೆಯುಂಟಾಯಿತು. (ತಾರೆಯು ಯೋಚನೆಗೊಳಗಾದಳು.)

ಪರಿ:—ಒಡತಿಯರೆ, ಈಗ ನೆನಪಾಯಿತು. ಮೊನ್ನೆ ನಡೆದ ಒಂದು ಸಂಗತಿಯನ್ನು ಹೇಳುತ್ತೇನೆ, ಕೇಳಿರಿ. ಮೊನ್ನೆ ನೀವು ಕಡಲೆಯನ್ನು ಬಿಸಲಿಗೆ ಹಾಕೆಂದು ಹೇಳಲಿಲ್ಲವೆ? ನಾನವುಗಳನ್ನು ಕೋಣೆಯ ಕಿಡಕಿಯ ಹತ್ತಿರ ಹರವುತ್ತ ನಿಂತಿದ್ದೆನು.

ತಾರೆ:—ಎಲ್ಲಿ? ಕೋಣೆಯ ಕಿಡಕಿಯ ಬಳಿಯಲ್ಲಿಯೆ?

ಪರಿ:—ಹೌದು. ಮುಂದಿನ ಮಾತನ್ನು ಕೇಳಿರಿ. ಕೋಣೆಯಲ್ಲಿ ಯಾರೊ ಹಾಡುತ್ತಿರುವುದು ಕೇಳಿಸಿತು. ನಾನು ಲಕ್ಷ್ಯವಿಟ್ಟು ಕೇಳಿದೆನು. ಯಜಮಾನರ ಸ್ವರವೆಂದು ಭಾಸವಾಯಿತು. ನಾನು ಭಯಗೊಂಡು ಓಡಿ ಬಂದೆನು.

ತಾರೆ:—ಏನು? ಇವರ ಸ್ವರವೆ? ಎಲ್ಲಿ ಕೇಳಿದೆ?

ಪರಿ:—ಮನೆಯ ಮೂಲೆಯಲ್ಲಿಯ ಕೋಣೆಯಲ್ಲಿ ಎಂದು ಆಗಲೆ ಹೇಳಿದೆನಲ್ಲ. ಇನ್ನೂ ಮುಂದೆ ಹೇಳುವೆನು, ಕೇಳಿರಿ. ಮುಂದೆ ಎರಡು ತಾಸು ಬಿಟ್ಟು ಆ ಸ್ಥಳಕ್ಕೆ ಹೋಗಿ ನೋಡಿದೆನು. ಅರ್ಧ ಕಡಲೆಯೋ ಇದ್ದಿಲ್ಲ. ಕೆಂಚನು ಕಳವು ಮಾಡಿರಬಹುದೆಂದು ಭಾವಿಸಿ ಇದ್ದ ಕಡಲೆಯನ್ನು ಒಳಗೆ ತಂದಿರಿಸಿದೆನು. ನಿನ್ನೆ ಕೆಂಚನನ್ನು ವಿಚಾರಿಸಲಾಗಿ ಅವನು ತಾನು ಕಡಲೆಯನ್ನು ನೋಡಿಲ್ಲವೆಂದು ಆಣೆ ಮಾಡಿ ಹೇಳಿದನು. ಅಷ್ಟು ಕಡಲೆಯನ್ನು ಮನುಷ್ಯರಿಂದ ತಿನ್ನಲಿಕ್ಕಾದೀತೆ? ಭೂತದ ಕೆಲಸವದು! ಒಡತಿಯರೇ, ಏನೇ ಇರಲಿ. ನೀವು ಇನ್ನು ಕೆಲವು ದಿವಸ ಆ ಕೋಣೆಯಲ್ಲಿ ಕಾಲಿಕ್ಕಬೇಡಿರಿ! ಅದರ ಪಕ್ಕದಲ್ಲಿ ಸುಳಿದಾಡಬೇಡಿರಿ ಸಹ!

ತಾರೆ:—ಛೀ, ಹುಚ್ಚೀ ಭೂತವೆಲ್ಲಿಂದ ಬರಬೇಕು? ನೀನು ಸುಳ್ಳೆ ಗಾಬರಿಯಾಗಿರುವೆ. ನಮ್ಮ ಮನೆಯಲ್ಲಿ ಎಂದೆಂದಿಗೂ ಭೂತವಿಲ್ಲ. ನಾನಿದುವರೆಗೆ ದೆವ್ವನ ಸುದ್ದಿಯನ್ನು ಕೇಳಿದವಳಲ್ಲ.

ಪರಿ:—ಅವ್ವನವರೆ, ನಾನು ಸುಳ್ಳು ಹೇಳುತ್ತಿರುವೆನೆಂದು ತಿಳಿದಿರುವಿರಾ? ನನ್ನಾಣೆಯಾಗಿಯೂ ನಾನು ಹೇಳಿದ್ದು ನಿಜ! ಯಜಮಾನರು ಅಪಘಾತದಿಂದ ಸತ್ತಿದ್ದಾರೆ. ಹೀಗೆ ಸತ್ತವರು ದೆವ್ವಗಳಾಗುತ್ತಾರೆಂದು ನಾನು ಕೇಳಿದ್ದೇನೆ. ಯಜಮಾನರ ಯಾವ ಆಶೆಯೂ ಪೂರ್ಣವಾಗಿರಲಿಲ್ಲ. ಅವ

ರಿಗೆ ಸಾಯುವ ವಯಸ್ಸಾಗಿತ್ತೆ? ಅವರೇ ಭೂತವಾಗಿ ಆ ಕೋಣೆಯಲ್ಲಿ....

ತಾರೆ:—ಇನ್ನು ನಿನ್ನ ಪಾಂಡಿತ್ಯವನ್ನು ಸಾಕುಮಾಡು. ನಡೆ, ನಾನೂ ಬರುವೆನು. ಇಬ್ಬರೂ ಹೋಗಿ ಆ ಕೋಣೆಯಲ್ಲಿ ಪರೀಕ್ಷಿಸೋಣ. ನಿಜ ಸಂಗತಿಯು ಹೊರಬಿದ್ದು ಹೋಗುವದು.

ಪರಿ:—ಒಡತಿಯರೆ, ನಾನೊಲ್ಲೆ! ನೀವು ಇಲ್ಲಿಯೇ ನನ್ನ ಕುತ್ತಿಗೆ ಹಿಚುಕಿದರೂ ಚಿಂತೆಯಿಲ್ಲ; ನಾನು ಆ ಕೋಣೆಯಲ್ಲಿ ಬರಲಾರೆನು!

ತಾರೆ:—ನಿನಗೆ ಬೇಡಾದರೆ ಬಿಡು. ನಾನೊಬ್ಬಳೇ ಹೋಗಿ ನೋಡು ವೆನು................

ಪರಿ.—ಅವ್ವನವರೆ, ಹೀಗೆನ್ನಬೇಡಿರಿ. ಒಮ್ಮೆಲೆ ಸಾಹಸಕ್ಕೆ ದುಡುಕ ಬೇಡಿರಿ. ನಿಮಗೆ ಯಜಮಾನರ ವಿಷಯದಲ್ಲಿ ಎಷ್ಟೇ ಪ್ರೀತಿ ಇದ್ದರೂ ಭೂತ ವಾಗಿರುವ ಅವರನ್ನು ಮಾತಾಡಿಸ ಬಯಿಸುವದು ಒಳಿತಲ್ಲ. ಮನುಷ್ಯನು ಸತ್ತು ಭೂತಜನ್ಮವನ್ನು ತಾಳಿದರೆ, ವಿಪರೀತ ಬುದ್ಧಿಯನ್ನು ಹೊಂದವನು. ನೀವೀಗ ಭೂತ ಜನ್ಮದಲ್ಲಿರುವ ಯಜಮಾನರ ಕೈಯಲ್ಲಿ ಸಿಕ್ಕರೆ, ಅವರು ನಿಮ್ಮನ್ನು ಗಂಟಲ ಹಿಚುಕಿ ಕೊಂದು ಬಿಡುವರು!

ತಾರೆ:—ಹೀಗಾದರೆ ನನಗೆ ಸುಖವಲ್ಲದೆ ದುಃಖವಿಲ್ಲ! ವಿಧವೆಯಾಗಿ ರುವದಕ್ಕಿಂತ, ಅವರ ಕೈಯಿಂದ ನನಗೆ ಮರಣವಾದರೆ ನನ್ನ ಸೌಭಾಗ್ಯಕ್ಕೆ ಎಣೆಯುಂಟೆ?

ಪರಿ:—ಅವ್ವನವರೆ, ಹೀಗೆನ್ನಬೇಡಿರಿ. ಬದುಕಿದ್ದರೆ ಬೇಕಾದ್ದು ಕಂಡೀರಿ. ಸಾಯುವದರಲ್ಲಿ ಸ್ವಾರಸ್ಯವಿಲ್ಲ. ಯಜಮಾನರು ಸತ್ತರೇನಾ ಯಿತು? ನಿಮಗೇತರ ಕೊರತೆ? ಇನ್ನು ನೀವು ಈ ಮನೆಗೆ ಸಂಪೂರ್ಣ ಮಾಲ ಕರು. ಸ್ವತಂತ್ರರು. ಬೇಕಾದಾಗ ಬೇಕಾದ ಕೆಲಸವನ್ನು ಮಾಡಿದರೂ ನಿಮ್ಮ ಕೈ ಹಿಡಿಯುವವರಿಲ್ಲ!

ತಾರೆ:—ಬಾಯಿಗೆ ಬಂದಂತೆ ಹರಟಹತ್ತಿದೆಯಲ್ಲ! ಇನ್ನು ಮಾತಾಡ ಬೇಡ. ನಡೆಯತ್ತ! ನಾನು ಕೋಣೆಯಲ್ಲಿ ಹೋಗಿ ಇವರನ್ನು ಹುಡುಕುವೆನು.

(ನಿಟ್ಟುಸಿರ ಬಿಡುವಳು.)

ಪರಿ:—ನೀವು ನನ್ನ ಮಾತ ಕೇಳುವದಿಲ್ಲವೆ? ವಿಷಪರೀಕ್ಷೆಯನ್ನು

ಮಾಡಿಯೇ ತೀರುವಿರಾ? ಫಿಲ್ಲಿರಿ, ನಾನು ದೂರ ಹೋಗಿ ಬಿಡುವೆನು. ಬಳಿಕ ನೀವು ನಿಮ್ಮ ಮನಸ್ಸಿಗೆ ಬಂದಂತೆ ಮಾಡಿಕೊಳ್ಳಿರಿ. (ಪಂಚಾಂಗಿಯು ಹರ ವಿದ್ದ ಪಾತ್ರಗಳನ್ನು ಕೂಡಿಸಿಟ್ಟು ಹೋಗುವಳು. ತಾರೆಯು ಆಲೋಚಿಸುತ್ತ ಒಳಗೆ ಹೋಗುವಳು.)

———

## ೩ನೆಯ ಪ್ರವೇಶ.

(ಬೀದಿಯಲ್ಲಿ ಕೆಂಚನೂ, ಚನ್ನನೂ ಪ್ರವೇಶಿಸುತ್ತಾರೆ)

ಕೆಂಚ:—ತಮ್ಮಾ, ಬಹು ದಿವಸಕ್ಕೆ ಭೆಟ್ಟಿಯಾಯಿತು. ಒಳಿತಾಗಿ ದ್ದೀಯಾ? ನಾಟಕವು ಹೇಗೆ ನಡೆದಿದೆ?

ಚನ್ನ:—ಅಣ್ಣಾ, ಏನ ಹೇಳಲಿ? ಇನ್ನು ನಾಟಕದಲ್ಲಿ ಸೋಗು ಹಾಕು ವದನ್ನು ಬಿಟ್ಟು, ಊರಿಗೆ ಹೋಗಿ ವ್ಯಾಪಾರ ಮಾಡಿಕೊಂಡಿರಬೇಕೆಂದು ಮಾಡಿದ್ದೇನೆ.

ಕೆಂಚ:—ಅದೇಕೆ, ನಾಟಕದಲ್ಲಿ ಪಾರ್ಟ ಮಾಡುವದು ನೆಟ್ಟಗಲ್ಲವೆ? ಯಾವುದಕ್ಕೂ ಕೊರತೆಯಿಲ್ಲ. ರಾಜನಂತೆ ವಿಲಾಸದಿಂದಿರುವೆ.

ಚನ್ನ:—ಮೊನ್ನೆ ನಾಟಕ ಕಂಪನಿಯ ಮಾಲಕನ ಸಂಗಡ ಜಗಳ ವಾಯಿತು. ಅವನು ನನ್ನನ್ನು ಹೊರಗೆ ಹಾಕಿದನು.

ಕೆಂಚ:—ಆ ನಾಟಕ ಕಂಪನಿಯವರು ಬೇಡೆಂದರೆ, ಮತ್ತೊಂದು ನಾಟಕ ಕಂಪನಿಯಲ್ಲಿ ಸೇರಬೇಕು. ಈ ಯುಗದಲ್ಲಿ ನಾಟಕವಾಡುವವರ ಭಾಗ್ಯವು ಹೆಚ್ಚಿದೆ. ಇಷ್ಟು ಲಾಭದಾಯಕ ಹೋರೆಯು ನಿನಗೆ ಮತ್ತೊಂದು ದೊರೆಯದು. ತಿಂಗಳೊಂದಕ್ಕೆ ಅರವತ್ತು ರೂಪಾಯಿ ಸಂಬಳ. ಮೇಲೆ ಪುಕ್ಕಟೆ ಊಟ-ಉಡಿಗೆಗಳು. ನಿನಗೆ ಇಷ್ಟು ಅನುಕೂಲತೆ ಮತ್ತೆಲ್ಲಿ ದೊರೆ ಯುವುದು?

ಚನ್ನ:—ದೊರೆಯದಿದ್ದರಿಲ್ಲ; ನನಗೆ ಈ ಪಟ್ಟಣದಲ್ಲಿ ಇರುವದೇ ಬೇಡಾಗಿದೆ. ನಾನು ನಮ್ಮೂರಿಗೆ ಹೋಗಿ ನಿಶ್ಚಿಂತೆಯಿಂದಿರಬೇಕೆಂದಿರುವೆನು.

ಕೆಂಚ:—ಆಗಲಿ. ಯಾರ ದೈವವು ಹೇಗಿದೆಯೆಂಬದನ್ನು ಹೇಳಲಿಕ್ಕೆ

ಬಾರದು. ನಾನು ಒಂದು ಮನೆಯಲ್ಲಿ ದ್ವಾರಪಾಲಕನ ಕೆಲಸ ಮಾಡು ತ್ತಿರುವುದು ನಿನಗೆ ಗೊತ್ತಿದೆಯಷ್ಟೆ? ಆ ಮನೆಯ ಮಾಲಕನು ಮೊದಲು ಶ್ರೀಮಂತನಿದ್ದರೂ ಈಗ ಧನವೆಲ್ಲವನ್ನು ಕಳಕೊಂಡು ಬಡವನಾಗಿದ್ದನು. ಅವ ನಿಗೆ ಮೊನ್ನೆ ಮೊನ್ನೆ ಒಮ್ಮಿಂದೊಮ್ಮೆಲೆ ಲಕ್ಷ ರೂಪಾಯಿಗಳು ಸಿಗುವದರಲ್ಲಿ ದ್ದುವು; ಆದರೆ ಆ ಲಕ್ಷ ರೂಪಾಯಿಗಳ ಸೌಖ್ಯವನ್ನನುಭವಿಸುವುದು ಅವನ ಹಣೆಯು ಬರಹದಲ್ಲಿರಲಿಲ್ಲ. ಶಿವರಾತ್ರಿಯ ಪರ್ವಣಿಯ ಸಮಯದಲ್ಲಿ ತುಂಗ ಭದ್ರೆಯ ಸ್ನಾನಕ್ಕೆಂದು ಹೋದಾಗ, ಅಕಸ್ಮಾತ್ತಾಗಿ ನದಿಯಲ್ಲಿ ಮುಳುಗಿ ಸತ್ತು ಹೋದನು!

ಚನ್ನ:—ಬಹು ವಿಷಾದದ ಸಂಗತಿಯು! ನಿನ್ನ ಮಾಲಕನ ಹೆಸರೇನು?

ಕೆಂಚ:—ಬಂಡೇರಾವ ಬಾಯಗ್ಗಳಿ.

ಚನ್ನ:—ಇನ್ನು ಆ ಲಕ್ಷ ರೂಪಾಯಿಗಳು ಯಾರಿಗೆ ದೊರೆಯುವವು?

ಕೆಂಚ:—ಬಂಡೇರಾಯನ ತಮ್ಮನಾದ ಗುಂಡೇರಾಯನಿಗೆ ದೊರೆಯ ತಕ್ಕವಿದ್ದವು; ಆದರೆ ಅವನು ಈ ಅವಧಿಯಲ್ಲಿಯೇ ಮಲೆಯಾಳದಲ್ಲಿ ಮಡಿದು ಹೋಗಿರುವನಂತೆ.

ಚನ್ನ:—ಓಹೋ, ಗೊತ್ತಾಯಿತು. ಈ ಬಗ್ಗೆ ನಾನು ಮೊನ್ನೆ ವರ್ತಮಾನ ಪತ್ರದಲ್ಲಿ ಓದಿರುವೆನು; ಆದರೆ ಅದರಲ್ಲಿ ಗುಂಡೇರಾಯನು ಸತ್ತ ಸಂಗತಿಯಿರಲಿಲ್ಲ.

ಕೆಂಚ:—ಗುಂಡೇರಾಯನ ಮರಣದ ವಿಷಯದಲ್ಲಿ ಸಂದೇಹವಿರು ವದು. ಅವನು ಬಹು ದಿನಗಳಿಂದ ಈ ಸೀಮೆಯನ್ನು ಬಿಟ್ಟು ಹೋದದ್ದೇ ನೋ ನಿಜ; ಅಂದಿನಿಂದ ಇಂದಿನ ವರೆಗೆ ಅವನನ್ನು ಯಾರೂ ಕಂಡಿಲ್ಲ; ಅವನಿಂದ ಪತ್ರಗಳೂ ಬಂದಿಲ್ಲ. ಕಾರಣ ಅವನು ಸತ್ತಿರಬೇಕೆಂದು ಬಹು ಜನರು ತರ್ಕಿಸುತ್ತಾರೆ.

ಚನ್ನ:—ಅಯ್ಯೋ! ಹೀಗಾಯಿತೆ? ಆ ಲಕ್ಷ ರೂಪಾಯಿಗಳಿಗೆ ವಾರಸದಾರರಿಲ್ಲದಾಯಿತೆ?

ಕೆಂಚ:—ಹೀಗೂ ಅನ್ನಲಿಕ್ಕಾಗದು. ಆ ರೂಪಾಯಿಗಳ ಭೋಗವು ಯಾರಿಗೆ ಸಲ್ಲತಕ್ಕದ್ದಿರುವದೆಂಬದನ್ನು ದೇವರು ಮಾತ್ರ ಬಲ್ಲನು!

ಚನ್ನ:—ಆಗಲಿ, ಈಗ ನನಗೆ ಕೆಲಸವಿದೆ. ಹೋಗಿ ಬರುವೆನು. ಅವಕಾಶವಿದ್ದಾಗ ಒಮ್ಮೆ ನಿನ್ನ ಮನೆಗೆ ಬರುವೆನು. ಆಗ ವಿಶೇಷವಾಗಿ ಮಾತಾಡೋಣವಂತೆ.

ಕೆಂಚ:—ಈಗ ಕೆಲಸವಿದ್ದರೆ ಹೋಗು. ಊರಿಗೆ ಹೋಗುವುದರೊಳಗೆ ಒಮ್ಮೆ ನಮ್ಮ ಮನೆಗೆ ಬಂದು ಹೋಗು

(ಕೆಂಚನು ಒಂದು ಕಡೆ ನಡೆಯುವನು, ಚನ್ನನು ಬೇರೊಂದು ಕಡೆ ಹೋಗುವನು.)

ಚನ್ನ:— ಲಕ್ಷ ರೂಪಾಯಿಗಳು ಸಾಮಾನ್ಯವಲ್ಲ ಈ ರೂಪಾಯಿಗಳನ್ನು ನಾನು ದೊರಕಿಸಿದೆನಾದರೆ, ನನ್ನ ಬಡತನವು ಹಿಂಗಿ ಹೋಗುವುದು. ಸಾಯುವ ವರೆಗೆ ನಾನು ನಿಶ್ಚಿಂತೆಯಿಂದ ಅರಸನಂತೆ ಸೊಗಸಿನಿಂದ ಕಾಲ ಕಳೆಯಬಹುದು. ನಾನು ಹಳ್ಳಿಯ ದೊಡ್ಡಾಟಗಳಲ್ಲಿ ಸೋಗು ಹಾಕಿ ಗಾವಿಲರನ್ನು ಸಂತೋಷಗೊಳಿಸಿದ್ದೇನೆ. ನಾಟಕಗಳಲ್ಲಿ ಪಾರ್ಟ ಮಾಡಿ ನಾಗರಿಕರ ಶಿಫಾರಸು ಹೊಂದಿದ್ದೇನೆ. ಇಂತಹ ನನಗೆ ಗುಂಡೇರಾಯನ ವೇಷದಲ್ಲಿ ಪ್ರಕಟನಾಗಿ ನಾಲ್ಕಾರು ಜನರನ್ನು ವಂಚಿಸುವುದು ಅಸಾಧ್ಯವೆ? ಒಳ್ಳೇ ಹಗುರಾದ ಕೆಲಸ. ಇದಕ್ಕಾಗಿ ನಾನು ಇನ್ನು ಕೆಲವು ಮಾಹಿತಿಯನ್ನು ದೊರಕಿಸಬೇಕು. ಸೌರಣೆಯನ್ನು ಮಾಡಿಕೊಂಡು ಗುಂಡೇರಾಯನಾಗಿ ಬಂಡೇರಾಯನ ಮನೆಯಲ್ಲಿ ಪ್ರಕಟನಾಗಬೇಕು. ಮನೆಯಲ್ಲಿಯ ಜನರಿಗೆ ನಾನೇ ಗುಂಡೇರಾಯನೆಂಬದನ್ನು ಮನವರಿಕೆ ಮಾಡಿಕೊಡಬೇಕು. ಬಳಿಕ ವಕೀಲರ ಮುಖಾಂತರ ಆ ಲಕ್ಷ ರೂಪಾಯಿಗಳನ್ನು ಸಂಪಾದಿಸಿ, ಆ ಮನೆಯಿಂದ ಹೊರಬಿದ್ದರಾಯಿತು. ಆಗಲಿ, ಏನಾಗುವದೋ ನೋಡುವೆನು.

(ಹೋಗುವನು.)

---

## ಆನೆಯ ಪ್ರವೇಶ.

[ತಾರೆಯು ಮನೆಯಲ್ಲಿ ಯೋಚಿಸುತ್ತ ಕುಳಿತಿರುವಳು.]

ತಾರೆ:—ನಾನು ಮೊದಲು ಗೇಣಿಕೆ ಹಾಕಿಟ್ಟಿರುವಂತೆ ಎಲ್ಲ ಕೆಲಸಗಳೂ ಸುಸೂತ್ರವಾಗಿ ಸಾಗಿವೆ. ಉದ್ದಿಷ್ಟಕಾರ್ಯವು ನಿರ್ವಿಘ್ನತೆಯಿಂದ ಕಡೆಗಾ

ಣುವ ಲಕ್ಷಣಗಳು ತೋರುತ್ತಿವೆ. ಇನ್ನು ಇವರು ಗುಂಡೇರಾಯನ ವೇಷದಲ್ಲಿ ಪ್ರಕಟರಾಗುವದೊಂದೇ ತಡ. ಲಕ್ಷ ರೂಪಾಯಿಗಳು ಕೈಸೇರುವವು. ಇವರು ಅಷ್ಟು ಬುದ್ಧಿವಂತರಲ್ಲ. ಕಾರಣ ಎಲ್ಲವನ್ನೂ ನಾನೇ ಕಲಿಸಿಕೊಡಬೇಕಾಗುತ್ತಿದೆ. ಹೇಳಿಕೊಟ್ಟರೂ ಅದನ್ನು ಯೋಗ್ಯರೀತಿಯಿಂದ ಕಡೆಹಾಯಿಸುವ ಸಾವಧಾನತೆಯಿಲ್ಲ. ಅಂದು ಕೋಣೆಯಲ್ಲಿ ಅಡಗಿ ಕುಳಿತ ತಾವು ಪದ ಹಾಡಹತ್ತಬೇಕೇಕೆ? ಪರಿಚಾರಿಕೆಯು ಬಾಯಿ ಬಂದು ಮಾಡಬೇಕಾದರೆ, ನನಗೆ ಸಾಕುಸಾಕಾಯಿತು! ಒಣ ಹಾಕಿದ್ದ ಕಡಲೆಯನ್ನು ಹಾಗೆ ಆಳತೆಗೆಟ್ಟು ತಿನ್ನಬೇಕೆ? ಅಪಚನವಾಗಿ ಜಡ್ಡಾಗಿದ್ದರೆ ಬಹಳ ಪಂಚಾಯತಿಯಾಗುತ್ತಿತ್ತು. ಅಜ್ಞಾತವಾಸದಲ್ಲಿರುವ ಇವರ ಪ್ರಕೃತಿಯನ್ನು ತೋರಿಸಲಿಕ್ಕೆ ಡಾಕ್ಟರನನು ಕರೆತರುವುದು ಸಾಧ್ಯವಿತ್ತೇ........?

(ಪರಿಚಾರಿಕೆಯು ವಿಧವೆಯೊಬ್ಬಳನ್ನು ಕರಕೊಂಡು ಬರುವಳು.)

ಪರಿ:—ಒಡತಿಯರೇ, ಇಲ್ಲಿ ನೋಡಿರಿ. ಇವರು ಯಜಮಾನರ ಸೋದರತ್ತೆಯುವರಂತೆ; ನಿಮ್ಮನ್ನು ಮಾತಾಡಿಸಬಂದಿದ್ದಾರೆ.

ತಾರೆ:—ಇವರ ಸೋದರತ್ತೆಯೆ............?

ವಿಧವೆ:—ನೀನು ನನ್ನನ್ನು ಗುರತಿಸುವುದಿಲ್ಲವೆ? ಹೇಗೆ ಗುರತು ಹತ್ತಬೇಕು? ಬಹು ದಿನಗಳ ಮಾತು. ನೀವೆಲ್ಲರೂ ನನ್ನನ್ನು ಮರೆದಿರಬಹುದು. ನಾನು ಮಾತ್ರ ನಿಮ್ಮನ್ನು ಮರೆತಿಲ್ಲ. ಬರಬೇಕು-ಬರಬೇಕು, ಎಂದು ಬಹು ದಿನಗಳಿಂದ ಹಾತೊರೆಯುತ್ತಿದ್ದೆನು; ಆದರೆ ಬರಲಿಕ್ಕಾಗಿರಲಿಲ್ಲ. ಗಟ್ಟಿ ಮನಸ್ಸು ಮಾಡಿ ಇಂದು ಬಂದೇ ಬಿಟ್ಟೆನು. ಇಲ್ಲಿ ಬಂದ ಬಳಿಕ ನನ್ನ ಆ ಸೋದರಳಿಯನು ಸತ್ತ ಹೃದಯವಿದಾರಕ ಸುದ್ದಿಯನ್ನು ಕೇಳಿದೆನು. ಅಯ್ಯೊ! ಬಂಡೇರಾಯ, ನಮ್ಮೆಲ್ಲರನ್ನು ಬಿಟ್ಟು ಸತ್ತು ಹೋದೆಯಾ? ಸಾಯುವ ಮುಂಚೆ ನಿನ್ನ ಈ ದುರ್ದೈವಿಯಾದ ಸೋದರತ್ತೆಯನ್ನು ಒಮ್ಮೆಯಾದರೂ ನೆನಿಸಿದೆಯಾ?

(ಹಣೆ ಹಣೆ ಬಡಕೊಳ್ಳುತ್ತ ದೊಡ್ಡ ಧ್ವನಿಯಿಂದ ಅಳಹತ್ತಿದಳು.)

ತಾರೆ (ವಿಸ್ಮಯದಿಂದ ದಿಟ್ಟಿಸಿ ನೋಡಿ):—ಒಮ್ಮೆಲೆ ರಂಬಾಟವೆಬ್ಬಿಸಿಬಿಟ್ಟರಲ್ಲ? ಶಾಂತರಾಗಿರಿ, ಶಾಂತರಾಗಿರಿ.

ವಿಧವೆ:—ಹೇಗೆ ಶಾಂತಳಾಗಲೆಮ್ಮಾ? ನೀನು ಹೆರವರ ಮನೆಯ ಹೆಂಗಸು. ಈ ಮನೆಗೆ ಬಂದು ಬಹಳವಾದರೆ ನಾಲ್ಕಾರು ವರ್ಷಗಳಾಗಿರ ಬಹುದು. ನಿನಗೆ ಬಂಡೇರಾಯನ ಮರಣದಿಂದ ನನಗಾದಷ್ಟು ದುಃಖವಾಗುವ ಸಂಭವವಿಲ್ಲ. ನಾನು ಅವನನ್ನು ಸಣ್ಣವನನ್ನು ದೊಡ್ಡವನನ್ನಾಗಿ ಮಾಡಿ ದವಳು. ನಾನು ಈ ದುಃಖವನ್ನು ಹೇಗೆ ತಡೆಯಲಿ? ಅಯ್ಯೋ! ಬಂಡೇ ರಾಯ, ನಾನು ಈಗ ಯಾರನ್ನು ಮಾತಾಡಿಸಲಿ? ಇಲ್ಲ ನನ್ನನ್ನು ಪ್ರೀತಿ ಯಿಂದ ಮಾತಾಡಿಸುವವರಾರು? ನನ್ನನ್ನು ಅನಾಥೆಯನ್ನಾಗಿ ಮಾಡಿ ಹೋದೆಯಾ?

(ಮತ್ತೆ ಅಳಹತ್ತಿದಳು.)

ತಾರೆ:—ಸುಮ್ಮನಾಗಿರಿ ಅತ್ತರೆ, ಸತ್ತವರು ಎದ್ದು ಬರುವರೆ?

ವಿಧವೆ:—ಇದು ನನಗೆ ಗೊತ್ತಿಲ್ಲವೇನು? ಆದರೂ ಅಳದಿರಲಾರೆನು. ಮನೆಯಲ್ಲಿ ಸತ್ತಿರುವರೆಂದ ಬಳಿಕ ಅಳಲೇಬೇಕು. ಒಳ್ಳೇ ಗಟ್ಟಿಯಾಗಿ ಅತ್ತು, ಎದೆ ಎದೆ ಬಡಕೊಂಡು, ಓಣಿಯಲ್ಲಿಯ ಯಾವತ್ತು ಜನರಿಗೆ ತಿಳಿಯ ಪಡಿಸಲೇ ಬೇಕು. ಇದು ನಮ್ಮ ಧರ್ಮಶಾಸ್ತ್ರದ ಮಾತು. ನಾವು ಧರ್ಮ ಶಾಸ್ತ್ರದ ಹೇಳಿಕೆಯಂತೆ ಅತ್ತು, ಕರೆದು ರಂಬಾಟವೆಬ್ಬಿಸಲಿಕ್ಕೇ ಬೇಕು. ಇಲ್ಲವಾದರೆ ಸತ್ತದ್ದೇ ಸುಳ್ಳೆನಿಸುವದು. ನೀನು ಈ ಕಾಲದ ಹೆಂಗಸು. ಮೇಲಾಗಿ ನಾಗರಿಕಳು. ನಿಮ್ಮಂಥವರು ಧರ್ಮಶಾಸ್ತ್ರದ ಅಪ್ಪಣೆಯನ್ನು ಮರೆದು ಬಿಟ್ಟಿರುವರು; ಆದರೆ ನಾನು ಹಿಂದಿನ ಕಾಲದವಳು. ಬಹು ದಿವಸ ಹಳ್ಳಿಯಲ್ಲಿದ್ದವಳು. ನಾನು ಧರ್ಮಶಾಸ್ತ್ರದ ಕಟ್ಟಳೆಯನ್ನು ಹೇಗೆ ಮೀರಲಿ? ಅಪ್ಪಾ, ಬಂಡೇರಾಯ, ಎಲ್ಲಿ ಹೋದೆಯಪ್ಪಾ? ಇನ್ನು ನಾನು ನಿನ್ನನ್ನು ಹೇಗೆ ಕಂಡೇನು? (ಮತ್ತಿಷ್ಟು ಉಚ್ಚಸ್ವರದಿಂದ ರೋದಿಸುವಳು. ಎದೆ ಎದೆ ಬಡಕೊಳ್ಳು ವಳು.) ಅಪ್ಪಾ, ಸಾಯುವಾಗ ನನ್ನನ್ನು ಸ್ಮರಿಸಿದೆಯಾ? ಈ ಸೋದರತ್ತೆಗೆ ಇನ್ನು ಗತಿಯೇನು? ನಾನು ಯಾರನ್ನು ಮರೆಹೊಗಲಿ? ಇನ್ನು ಯಾರು ನನ್ನ ರಕ್ಷಣೆ ಮಾಡುವರು. ಅಯ್ಯೋ! ದೈವವೇ! ನೀನು ನನ್ನ ವಿಷಯದಲ್ಲಿ ವಿಮುಖನಾದೆಯಾ? (ಮತ್ತೆ ಅಳುವಳು ಹಣೆಗಟ್ಟಿಸಿಕೊಳ್ಳುವಳು.) ಮಗಳೆ, ನೀನು ಬಂಡೇರಾಯನು ಸಾಯುವ ಕಾಲಕ್ಕೆ ಅವನ ಹತ್ತರಿದ್ದೆಯಲ್ಲವೆ?

ಅವನು ಸಾಯುವಾಗ್ಗೆ ನನ್ನ ಹೆಸರ ತೆಗೆದಿದ್ದನೆ? ನನಗೇನಾದರೂ ಕೊಡೆಂದು ಹೇಳಲಿಲ್ಲವೆ? ಅವನೆಂದೂ ನನ್ನನ್ನು ಮರೆಯತಕ್ಕವನಲ್ಲ! ನನ್ನ ಮೇಲೆ ಅವನ ಪ್ರೀತಿ ಬಹಳ. ಅವನು ನನಗಾಗಿ ಏನನ್ನಾದರೂ ತೆಗೆದಿರಿಸಿರಲಿಕ್ಕೆ ಬೇಕು.

ತಾರೆ:—ತಮ್ಮ ಹತ್ತರ ಇದ್ದರೆ ನಿಮಗೆ ತೆಗೆದಿಡಬೇಕಷ್ಟೆ? ಇವರು ಹಾಗೆ ಶ್ರೀಮಂತರಾಗಿದ್ದರೆ, ತುಂಗಭದ್ರೆಯಲ್ಲಿ ಹಾರಿಕೊಂಡು ಪ್ರಾಣ ಬಿಡುತ್ತಿದ್ದರೆ?

ವಿಧವೆ:—ಲಕ್ಷ ರೂಪಾಯಿಗಳ ಬಡ್ಡಿಯು ದೊರೆಯುತ್ತಿತ್ತಲ್ಲ?

ತಾರೆ:—ಇದು ಮುಂದಿನ ಮಾತು. ಸದ್ಯಕ್ಕೆ ಹಣದ ಅಡಚಣೆಯು ಬಹಳವಾದದ್ದರಿಂದಲೇ ಇವರು ಸಂಸಾರಕ್ಕೆ ಬೇಸತ್ತು ಸತ್ತು ಹೋದರು!

(ತಾರೆಯು ಕಣ್ಣೀರ ಸುರಿಸುವಳು.)

ವಿಧವೆ:—ಇನ್ನು ಆ ಲಕ್ಷ ರೂಪಾಯಿಗಳು ಯಾರಿಗೆ ದೊರೆಯುವವು?

ತಾರೆ:—ಗುಂಡೇರಾಯನಿಗೆ.

ವಿಧವೆ:—ಒಳಿತೇ ಸರಿ. ನನಗೆ ಬಂಡೇರಾಯನೂ ಅಷ್ಟೇ; ಗುಂಡೇರಾಯನೂ ಅಷ್ಟೇ. ನಾನು ಇಬ್ಬರನ್ನೂ ಸರಿಯಾಗಿ ಪ್ರೀತಿಸುತ್ತೇನೆ. ಮಗಳೆ, ನಾನು ಈ ಸಮಯದಲ್ಲಿ ನಿನಗೊಂದು ಉಪದೇಶದ ಮಾತು ಹೇಳುತ್ತೇನೆ. ಆ ಲಕ್ಷ ರೂಪಾಯಿಗಳನ್ನು ಗಂಡೇರಾಯನು ಹೊಂದುವನೆಂದು ನೀನು ವ್ಯಥೆಗೊಳ್ಳಬೇಡ. ಮತ್ಸರಗ್ರಸ್ತಳಾಗಬೇಡ. ನನ್ನ ಗುಂಡೇರಾಯನು ಬಹಳ ಒಳ್ಳೆಯವನು. ಅವನು ಬಂಡೇರಾಯನಂತೆಯೆ ನಿನ್ನನ್ನು ರಕ್ಷಿಸುವನು; ಆದರೆ ಮೊನ್ನೆ ಮೊನ್ನೆ ಗಂಡ ಸತ್ತು ವಿಧವೆಯಾಗಿದ್ದ ನೀನು, ಇನ್ನು ಮನೆತನದ ಹಿರಿಯತನವನ್ನು ಮಾಡ ಬಯಿಸುವುದು ಒಳಿತಲ್ಲ ಅದನ್ನು ನನಗೆ ಒಪ್ಪಿಸಿ ಬಿಡು. ಗುಂಡೇರಾಯನು ಬಂದನೆಂದರೆ, ಅವನನ್ನು ಆದರದಿಂದ ಬರಮಾಡಿಕೊಳ್ಳು. ಅವನಿಗೆ ಆ ಲಕ್ಷ ರೂಪಾಯಿಗಳು ಸಿಗುವುದಕ್ಕೆ ಸಹಾಯ ಮಾಡು. ನಿನಗೆ ಗುಂಡೇರಾಯನ ಸಂರಕ್ಷಣೆಯಲ್ಲಿರಲಿಕ್ಕೆ ಮನಸ್ಸಾಗದಿದ್ದರೆ, ಕಾಶೀಯಾತ್ರೆಗೆ ಹೊರಡುವೆಯಂತೆ!

ತಾರೆ:—ಗುಂಡೇರಾಯನು........

ವಿಧವೆ:--ನಾನು ಹೇಳುತ್ತಿರುವುದಕ್ಕೆ ಪ್ರತಿ ಮಾತನಾಡಬೇಡ. ಈಗಿನ ನಿಮ್ಮಂತಹ ಹೆಂಗಸರಿಗೆ ಹಿರಿಯರ ಮಾತು ಸೇರುವುದಿಲ್ಲ. ಮನಬಂದಂತೆ ಮಾತಾಡಹತ್ತುವಿರಿ. ಇದರ ಪರಿಣಾಮವು ಒಳಿತಾಗುವದಿಲ್ಲ.

ತಾರೆ:—ಮುಂದೆ ಏನೇ ಆಗಲಿ; ಮೊದಲು ಸದ್ಯದ ಬಗ್ಗೆ ಆಲೋಚಿಸ ಬೇಕಷ್ಟೆ? ಗುಂಡೇರಾಯನೂ ಸತ್ತು ಹೋಗಿರುವನು.

ವಿಧವೆ:—ಛೇ! ಹೀಗೆ ಅಭದ್ರ ಮಾತಾಡಬೇಡ. ಒಳಿತೆನ್ನು. ಕಲಿ ಕಾಲದ ಹೆಂಗಸು! ಶುಭಾಶುಭಗಳ ವಿಚಾರವಿಲ್ಲ! ಬಾಯಿಗೆ ಬಂದಂತೆ ಮಾತಾಡಿಬಿಟ್ಟರಾಯಿತೇ? ಬಂಡೇರಾಯನು ಸತ್ತಿದ್ದರೂ ಗುಂಡೇರಾಯ ನಿರುವನೆಂದು ನಾನು ಸಮಾಧಾನ ಹಚ್ಚಿಕೊಂಡಿರುವೆನು.

(ಪರಿಚಾರಿಕೆಯು ಬರುವಳು.)

ಪರಿ:—ಒಡತಿಯರೆ, ಅಲ್ಲಿ ನೋಡಿರಿ. ಮತ್ತೊಬ್ಬಳು ಬಂದಿರುವಳು.

ತಾರೆ:—ಅವಳಾರು?

ಪರಿ:—ಯಾರೆಂಬದು ನನಗೆ ಗೊತ್ತಿಲ್ಲ. ಗಾಡಿ ಹತ್ತಿಕೊಂಡು ಬಂದಿದ್ದಾಳೆ. ಸಂಗಡ ಹಾಸುಗೆಯ ಸುರಳಿಯಿದೆ. ಈ ಮನೆಯಲ್ಲಿ ವಾಸ್ತವ್ಯ ಹೂಡುವ ಬೇತು ಮಾಡಿಕೊಂಡು ಬಂದಿರುವಂತೆ ಕಾಣುತ್ತದೆ.

ವಿಧವೆ:—ಅವಳೂ ನಮ್ಮ ಆಪ್ತೇಷ್ಟರಲ್ಲಿ ಒಬ್ಬಳಾಗಿರಬಹುದು.

ತಾರೆ:—ನೀವು ಅವಳನ್ನು ಸಂಗಡ ಕರೆತಂದಿದ್ದಿರೇನು?

ವಿಧವೆ:—ಇಲ್ಲ, ನಾನೊಬ್ಬಳೇ ಬಂದಿದ್ದೇನೆ. ನನ್ನ ಸಂಗಡಿಗ ರಾರೂ ಇಲ್ಲ.

ತಾರೆ:—ಹೀಗಿದ್ದರೆ ಅವಳಾರು?

ಪರಿ:—ಒಳ್ಳೇ ಸುಧಾರಿಸಿದ ಹೆಂಗಸು. ಆಡಂಬರದಿಂದ ಬಂದಿದ್ದಾಳೆ. ನಾನು ನೀವಾರೆಂದು ಕೇಳಿದರೆ ಉತ್ತರಗೊಡಲಿಲ್ಲ. ಕೆಂಚನ ಮೇಲೆ ಅಧಿ ಕಾರ ನಡಿಸಿ, ಅವನಿಂದ ಸಾಮಾನುಗಳನ್ನು ತೆಗೆಸಿಡಿಸಿದಳು. ಇಷ್ಟರಲ್ಲಿಯೆ ಬರಬಹುದು. ಅದೊ, ಅಲ್ಲಿ ಬಂದಳು; ನೋಡಿರಿ.

ವಿಧವೆ:—ನಾನಿನ್ನು ಮತ್ತೆ ಅಳಲಿಕ್ಕೆ ಬೇಕು. ಹೊಸವಾಗಿ ಈ ಮನೆಗೆ ಬಂದ ಅವಳಿಗೆ ಬಂಡೇರಾಯನ ವಿಷಯದಲ್ಲಿಯ ನನ್ನ ಪ್ರೀತಿಯನ್ನು

ಪ್ರದರ್ಶಿಸಲಿಕ್ಕೆ ಬೇಕು. (ದೊಡ್ಡ ದನಿಯಿಂದ ಅಳಹತ್ತಿದಳು. ಕೆಂಚನ ಸಂಗಡ ಕಮಲೆಯು ಪ್ರವೇಶಿಸುವಳು. ತಾರೆಯು ಅವಳ ಹತ್ತಿರ ಹೋಗುವಳು.)

ತಾರೆ:—ನೀನು ಯಾರು? (ಕಮಲೆಯು ವಿಷಾದಪೂರ್ಣ ನೋಟದಿಂದ ತಾರೆಯನ್ನು ನೋಡಿದಳು. ತಾರೆಯು ಚಕಿತಳಾಗಿ ನೋಡುತ್ತ ನಿಂತಳು,)

ತಾರೆ (ಮತ್ತೆ):—ನೀನಾರು?

ಕಮಲೆ:—ನಾನು ಯಾರೆ? ಅಯ್ಯೋ! (ನಿಟ್ಟುಸಿರ ಬಿಡುವಳು) ಏನ ಹೇಳಲಿ? ಅಕ್ಕಾ, ನಾನು ಚಿರ ಅಭಾಗಿನಿ........

ತಾರೆ:—ಹೀಗೆಂದರೆ ನನಗೇನು ತಿಳಿಯಬೇಕು? ಚನ್ನಾಗಿ ಮಾತಾಡು.

ಕೆಂಚ:-ಒಡತಿಯರೆ, ನಿಮಗೆ ಹೊಳೆಯಲೊಲ್ಲದೇನು? ಇವಳು ಸೋಗು ಹಾಕಿಕೊಂಡು ಬಂದಿದ್ದಾಳೆ.

ಕಮಲೆ:—ನಾನು ಸೋಗು ಹಾಕಿದವಳಲ್ಲ. ನಿಜವಾಗಿಯೂ ಪತಿ ವಿರಹಿಣಿಯು! ಅತಿ ದೀನೆಯು!

ತಾರೆ:—ನಿನ್ನ ಹೆಸರೇನು?

ಕಮಲೆ:—ಅಕ್ಕಾ, ಹೇಳಲಿಕ್ಕೆ ಬಾಯಿ ಏಳಲೊಲ್ಲದು! ನನ್ನ ಈ ವರೆಗಿನ ಆತ್ಮವೃತ್ತವು ದುಃಖಮಯವಾದದ್ದು. ನೀನದನ್ನು ಕೇಳಬಯಿಸುವೆಯಾ? ಕೇಳಿದೆಯಾದರೆ, ನಿನ್ನ ಎರಡೂ ಕಣ್ಣುಗಳಿಂದ ಅಶ್ರುಗಳ ಪ್ರವಾಹವು ಒತ್ತರದಿಂದ ಹರಿಯಹತ್ತುವುದು! ಎದೆಯ ಮೇಲೆ ವೇದನೆಯ ಪರ್ವತವು ಬಂದು ಕುಳ್ಳಿರುವುದು! ವಾಹಿನಿಗಳಲ್ಲಿಯ ಪ್ರತಿಯೊಂದು ರಕ್ತಬಿಂದುವು ತುಷಾರಕಣವಾಗಿ, ಪರಿಣಮಿಸುವುದು! ಅಕ್ಕಾ, ಆ ಕತೆಯು ಬಹು ದೊಡ್ಡದು. ಅದನ್ನು ಕೇಳುವ ಧೈರ್ಯವು ನಿನಗಿದೆಯೆ?

ಕೆಂಚ:—ಒಡತಿಯರೆ, ದೊಡ್ಡ ಮನೆತನದ ಈ ಹೆಣ್ಣು ಮಗಳು ಮನೋವ್ಯಥೆಯಿಂದ ಹುಚ್ಚಿಯಾಗಿರುವಂತೆ ಕಾಣುತ್ತದೆ!

ಕಮಲೆ:-ಅಹುದು. ಅಕ್ಕಾ, ನಿಜವಾಗಿಯೂ ನಾನು ಹುಚ್ಚಿಯೇ ಸರಿ!

ವಿಧವೆ:—ತಂಗೀ, ಇದಕ್ಕೇಕೆ ಚಿಂತಿಸುವೆಯಮ್ಮಾ? ನಮ್ಮೂರಲ್ಲಿ ಒಂದು ಬಳ್ಳಿಯಿದೆ. ನೀನು ಅದರ ಹತ್ತರ ಹಾಯ್ದು ಹೋದರೆ ಸಾಕು! ಹುಚ್ಚು ಹಾರಿ ಹೋಗುವುದು!

ತಾರೆ:—ಈಗ ಹುಡುಗಾಟಿಕೆಯ ಮಾತು ಬೇಡ. ಕೆಂಚ, ನೀನು ಸುಮ್ಮನಿರು. ತಂಗಿ, ನೀನಾರು? ಇಲ್ಲಿಗೇಕೆ ಬಂದಿರುವೆ? ನಿನಗೇನು ಬೇಕು?

ಕಮಲೆ:—ನನಗೇನು ಬೇಕಾಗಿದೆಯೆ? ಏನೆಂದು ಹೇಳಲಿ? ನಾನು ಹತಭಾಗಿನಿಯು! ಮುಗಿಲಲ್ಲಿಯ ಚಂದ್ರಮನನ್ನು ಹಿಡಿಯ ಬಯಿಸಿದವಳು!...

ತಾರೆ:—ಈ ತರದ ಗೂಢ ಮಾತು ಬೇಡ! ಸ್ಪಷ್ಟವಾಗಿ ಹೇಳು.

ಕಮಲೆ:—(ನಿಟ್ಟುಸಿರ ಬಿಡುವಳು.) ಆಗಲಿ, ಹೇಳುವೆನು ಕೇಳು. ನೀನು ಬಂಡೇರಾಯರ ಹೆಂಡತಿಯಾಗಿರುವಂತೆ ತೋರುತ್ತಿದೆ. ಲಕ್ಷ ರೂಪಾಯಿಗಳ ಬಡ್ಡಿ ದೊರೆಯುವದೆಂಬ ಸುದ್ದಿಯನ್ನು ಕೇಳಿ, ನೇರೆ ದಪ್ಪಿದ ಹರ್ಷಕ್ಕೊಳಗಾಗಿರುತ್ತೀ; ಆದರೆ ಬಂಡೇರಾಯರು ತುಂಗಭದ್ರೆಯಲ್ಲಿ ಹಾರಿಕೊಂಡು ಸತ್ತಿರುವರಷ್ಟೆ? ನಾನು ಆ ಲಕ್ಷ ರೂಪಾಯಿಗಳ ಅಸಲ ಮಾಲಕರಾದ ಗುಂಡೇರಾಯರ ಹೆಂಡತಿಯು

ತಾರೆ:—ಈಗ ಗುಂಡೇರಾಯನೆಲ್ಲಿರುವನು? ಇಲ್ಲಿಗೆ ಅವನೇಕೆ ಬರಲಿಲ್ಲ?

ಕಮಲೆ:—ಅಕ್ಕಾ, ಆಗಲೆ ಹೇಳಿದೆನಲ್ಲ! ನನ್ನ ಜೀವನ ಚರಿತ್ರೆಯು ಕರುಣಾರಸಪೂರ್ಣವಾಗಿದೆಯೆಂತ.

ತಾರೆ:—ನೀನು ಇದು ವರೆಗೆ ಎಲ್ಲಿದ್ದೆ? ಈಗೇಕೆ ಇಲ್ಲಿಗೆ ಬಂದಿರುವೆ?

ಕಮಲೆ:—ನಾನು ಎಲ್ಲಿಯವಳೆಂಬದು ನಿನಗೆ ಗೊತ್ತುಂಟು. ಈಗ ಒಂದು ಪ್ರಯೋಜನಕ್ಕೋಸುಗ ಇಲ್ಲಿಗೆ ಬರಬೇಕಾಯಿತು. ಬಂಡೇರಾಯರು ಸತ್ತಿರುವರು. ಇವರು ಪತ್ತೆಯಿಲ್ಲದೆ ಅದೃಶ್ಯರಾಗಿರುವರು. ಈ ಸ್ಥಿತಿಯಲ್ಲಿ ಆ ಲಕ್ಷ ರೂಪಾಯಿಗಳು ಯಾರಿಗೆ ಸಿಗುತ್ತವೆಯೆಂಬದನ್ನು ಕೇಳಿಕೊಳ್ಳುವ ಕುತೂಹಲತೆಯಿಂದ ನಾನಿಲ್ಲಿಗೆ ಬಂದಿರುವೆನು.

ತಾರೆ:—ಕೇಳಿಕೊಂಡು ಮಾಡುವುದೇನು?

ಕಮಲೆ:—ಅವರಿಬ್ಬರು ಇಲ್ಲದಿರುವಾಗ ಅವರ ಹೆಂಡಂದಿರು ಆ ಲಕ್ಷ ರೂಪಾಯಿಗಳಿಗೆ ಒಡತಿಯರಾಗುವದಿಲ್ಲವೆ? ಮೃತ್ಯುಪತ್ರದಲ್ಲಿ ಈ ಸಂಗತಿಯನ್ನು ಕಾಣಿಸಿಲ್ಲವೆ?

ತಾರೆ:—ಆ ಕಾಯ್ದೆಯ ಪ್ರಶ್ನೆಯನ್ನು ನಾನರಿಯೆನು! ಮೃತ್ಯುಪತ್ರದ ಮುಂದಿನ ಭಾಗವನ್ನೂ ನಾನು ತಿಳಿದವಳಲ್ಲ.

ಕಮಲೆ:—ಇನ್ನು ನಾವಿಬ್ಬರೂ ಕೂಡಿ ತಿಳಕೊಳ್ಳೋಣ. ಮೃತ್ಯು ಪತ್ರದಲ್ಲಿ ಮುಂದಿನ ವ್ಯವಸ್ಥೆಯು ಉಲ್ಲೇಖವಿರಲೇಬೇಕು.

(ಪರಿಚಾರಿಕೆಯು ಬರುವಳು.)

ಪರಿ:—ಒಡತಿಯರೆ, ಗುಂಡೇರಾಯರು ಬಂದಿದ್ದಾರೆ.

ತಾರೆ:—ಕೆಂಚ, ನೀನು ಹೋಗಿ ಅವರನ್ನು ಒಳಗೆ ಕರಕೊಂಡು ಬಾ. (ಕೆಂಚನು ಹೋಗುವನು.)

ಪರಿ:—ಲಕ್ಷ ರೂಪಾಯಿಗಳ ಮೋಹವು ಸಾಮಾನ್ಯವೆ? ಇನ್ನು ಸತ್ತವರು ಸಹ ಧಾವಿಸಿ ಬರುವರು. ಇವರ ಚಾಕರಿಯನ್ನು ಮಾಡಬೇಕಾದರೆ ನನಗೆ ಸಾಕು ಸಾಕಾಗಿ ಹೋಗುವದು. (ಹೋಗುವಳು.)

ಕಮಲೆ (ತನ್ನಲ್ಲಿಯೆ):—ಗುಂಡೇರಾಯನು ಸತ್ತಿರುವನೆಂದು ಸುದ್ದಿಯು ಕೇಳಿದ್ದೆನು. ಈ ಸುದ್ದಿಯು ಸುಳ್ಳಾಗಿರುವಂತೆ ತೋರುತ್ತಿದೆ; ಇಲ್ಲವೆ ಈಗ ಬರುತ್ತಿರುವವನು ನನ್ನಂತೆಯೆ ವೇಷಧಾರಿಯಾಗಿರಬೇಕು. ಏನೇ ಆಗಲಿ, ಲಕ್ಷ ರೂಪಾಯಿಗಳು! ಇವುಗಳ ಆಶೆಯನ್ನು ತ್ಯಜಿಸುವದು ಸಾಮಾನ್ಯವಲ್ಲ. (ಪ್ರಕಾಶ ರೀತಿಯಿಂದ) ಇವರು ಬಂದಿರುವರೆ? ಅತ್ಯಂತ ಆನಂದದ ಸಂಗತಿಯು! ಈ ಆನಂದದ ಭರದಲ್ಲಿ ನನಗೆ ಏನೂ ಕಾಣದಾಗಿದೆ! ಅಕ್ಕಾ, ನಾನು ಬೀಳುವುದರಲ್ಲಿರುವೆನು. ನನ್ನನ್ನು ಗಟ್ಟಿಯಾಗಿ ಹಿಡಕೊಳ್ಳು........

ವಿಧವೆ:—ಅಪ್ಪಾ, ಗುಂಡೇರಾಯ, ಬಂದೆಯಾ? ಹೀಗೆ ಬಾ.

ತಾರೆ:—ಹೀಗೆ ಅವಸರ ಮಾಡಬೇಡ. ದಣಿದು ಬಂದಿದ್ದಾನೆ. ತುಸ ವಿಶ್ರಾಂತಿಯ ತಕ್ಕೊಳ್ಳಲಿ!

ವಿಧವೆ:—ನೀನು ಹೀಗೆ ಪ್ರತಿಯೊಂದರಲ್ಲಿ ನಿನ್ನ ಅಧಿಕಾರವನ್ನು ತೋರಿಸಬರಬೇಡ. ನಿನಗಿಂತಲೂ ನನಗೆ ಹೆಚ್ಚಾಗಿ ತಿಳಿಯುತ್ತಿದೆ. ನೀನು ಎಷ್ಟಾದರೂ ಹೆರವಳು. ಗುಂಡೇರಾಯನ ಹಿತವು ನಿನಗಿಂತಲೂ ನನ್ನಿಂದ ಹೆಚ್ಚಾಗುವಂತಿದೆ!

ಕಮಲೆ:—ಪ್ರಿಯತಮ, ಬಂದಿರಾ? ನೀವು ಈ ಚಿರವಿರಹಿಣಿಯನ್ನು ಹುಡುಕಿಕೊಂಡು ಬಂದಿರಾ?

(ಮೂರ್ಛೆ ಹೋಗುವವಳಂತೆ ನಟಿಸುವಳು)

(ಗುಂಡೇರಾಯನ ವೇಷದಲ್ಲಿ ಬಂಡೇರಾಯನು ಪ್ರವೇಶಿಸುವನು.)

ತಾರೆ:—ಪ್ರಿಯ ಮೈದುನನೇ, ಬಾ, ಹೀಗೆ ಬಾ; ಇಲ್ಲಿ ವಿಶ್ರಮಿಸು. ನಿನಗೆ ಈಗ ನನ್ನ ನೆನಪಾಯಿತೆ?

ಬಂಡೇರಾಯ:—ಅತ್ತಿಗೆ, ಏನು ಮಾಡಲಿ? ವ್ಯಾಪಾರೋದ್ಯೋಗ ಗಳಲ್ಲಿ ತೊಡಗಿದ್ದ ನನಗೆ ಇದು ವರೆಗೆ ಇಲ್ಲಿಗೆ ಬರಲಿಕ್ಕೆ ಅವಕಾಶವೇ ದೊರೆ ದಿದ್ದಿಲ್ಲ. ಅಣ್ಣನು ಸತ್ತ ಸುದ್ದಿಯನ್ನು ಮೊನ್ನೆ ಕೇಳಿದೆನು. ಕೂಡಲೆ ಹೊರಟು ಬಂದೆನು. ಅವನು ನನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದನು; ಆದರೆ ನಿರ್ಭಾಗ್ಯನಾದ ನಾನು ಅವನ ಋಣವನ್ನು ತೀರಿಸದೆ ಹೋದೆನು. ಈಶ್ವರೇಚ್ಛೆಗೆ ಉಪಾಯವಿಲ್ಲ. ಅತ್ತಿಗೆ, ಈಗ ನಾನು ನನ್ನ ಆ ಅಣ್ಣನ ಸಂಗಮರವರಿ ಕಲ್ಲಿನ ಮೂರ್ತಿಯೊಂದನ್ನು ಮಾಡಿಸಿ, ಅದನ್ನು ಈ ಮನೆ ಯಲ್ಲಿ ಸ್ಥಾಪಿಸಬೇಕೆಂದಿರುವೆನು ಮುಂಬಯಿಯ ಒಬ್ಬ ಹೆಸರಾದ ಚಿತ್ರ ಕಾರನಿಗೆ ಈಗಾಗಲೆ ಆರ್ಡರು ಕೊಟ್ಟಿರುವೆನು. ತಿಂಗಳೊಪ್ಪತ್ತಿನಲ್ಲೇ ಮೂರ್ತಿಯು ಸಿದ್ಧವಾಗಿ ಬರಬಹುದು. ಬಂದ ಬಳಿಕ ಒಂದು ದೊಡ್ಡ ಸಮಾರಂಭವನ್ನು ಮಾಡಿ, ಮೂರ್ತಿಯನ್ನು ಪ್ರತಿಷ್ಠಾಪಿಸೋಣ. (ಕಮಲಿ ಯನ್ನೂ, ವಿಧವೆಯನ್ನೂ ತೋರಿ) ಇವರಾರು? ನನಗಿವರ ಗುರತು ಹತ್ತಲೊಲ್ಲ ದಲ್ಲ? (ಕಮಲೆಯು ನಾಚಿ ಕೆಳಗ ಮೋರೆ ಮಾಡಿದಳು ವಿಧವೆಯು ಮೋರೆಯಲ್ಲಿ ನಗುವನ್ನು ತಂದುಕೊಂಡು, ದಂತಪ್ರದರ್ಶನ ಮಾಡಿದಳು. ಬಂಡೇರಾಯನು ಆಶ್ಚರ್ಯ ದಿಂದ ನೋಡುತ್ತ ನಿಂತನು )

ತಾರೆ:-ಇವರಾರೆಂಬದನ್ನು ನೀನರಿಯೆಯಾ? ಇವಳು ನಿನ್ನ ಹೆಂಡತಿ....!

ಬಂಡೇರಾಯ:—ನನ್ನ ಹೆಂಡತಿಯೆ?

ತಾರೆ: —ಹೌದು; ಮತ್ತು ಇವಳು ನಿನ್ನ ಸೋದರತ್ತೆಯು.

ಬಂಡೇರಾಯ:—ನನ್ನ ಸೋದರತ್ತೆಯೆ? ಇವಳು ಯಾವ ಕಾಲಕ್ಕೂ ಇದ್ದಿಲ್ಲ. (ಗೇನಿಕೆ ಹಾಕಿ) ಇವಳು ಸುಳ್ಳಾಡುತ್ತಿದ್ದಾಳೆ. ನನಗೆ ಸೋದರತ್ತೆ ಯಿದ್ದದ್ದೇ ನನ್ನ ಸ್ಮರಣೆಯಲ್ಲಿಲ್ಲ.

ವಿಧವೆ:—ಅಪ್ಪಾ, ಗುಂಡೇರಾಯ, ಹೀಗೆ ಹಾರಿಸಿ ಮಾತನಾಡಬೇಡ. ನಾನು ನಿನ್ನನ್ನು ಸಣ್ಣವನಿದ್ದಾಗ ಎತ್ತಿ ಆಡಿಸಿದ್ದೇನೆ. ನೀನು ನಿನ್ನ ಆ ಚಿಕ್ಕ

ವಯಸ್ಸಿನಲ್ಲಿ ನಾನು ಉಣಿಸಿದರೇನೇ ಉಣ್ಣುತ್ತಿದ್ದೆ ನಾನು ಹೇಳುತ್ತಿರುವ ಕಥೆಗಳನ್ನು ಕೇಳುತ್ತ ಮಲಗುತ್ತಿದ್ದೆ. ನಾನು ಒಂದು ದಿನ ಇಲ್ಲವಾದರೆ, ನಿನ್ನ ಕೆಲಸ ಸಾಗುತ್ತಿದ್ದಿಲ್ಲ. ಹೀಗಿದ್ದು, ಇಂದು ನನ್ನನ್ನು ಸಂಪೂರ್ಣವಾಗಿ ಮರೆದು ಬಿಟ್ಟೆಯಾ? ನಿನ್ನದೇನು ತಪ್ಪು? ನನ್ನ ದೈವವೇ ಅಂಥ ಕೆಟ್ಟದು!

ಬಂಡೇರಾಯ:—ನನಗೆ ಸೋದರತ್ತೆಯಿದ್ದ ನೆನವು ಈಗಲೂ ಆಗ ಲೊಲ್ಲದು? ನಾನು ಸಣ್ಣವನಿದ್ದಾಗ ಅಬಚಿಯೊಬ್ಬಳಿದ್ದಳು. ಅವಳ ನೆನಪು ನನಗೆ ಈಗಲೂ ಇದೆ.

ವಿಧವೆ:—ಅಪ್ಪಾ, ಹೀಗೆ ಮಾತಾಡು. ಈಗ ಚನ್ನಾಗಿ ಹಾದಿಗೆ ಬಂದೆ. ನಾನು ನಿಜವಾಗಿಯೂ, ನಿನ್ನ ಸೋದರತ್ತೆಯು; ಆದರೆ ನೀನು ಸಣ್ಣವನಿರುವಾಗ ನನ್ನನ್ನು ಅಬಚಿಯೆಂದು ಕರೆಯುತ್ತಿದ್ದೆ. ಹುಡುಗನು ಅನ್ನಲೊಲ್ಲನೇಕೆ; ದೊಡ್ಡವನಾದ ಮೇಲೆ ತಾನೇ ತಿಳಕೊಳ್ಳುತ್ತಾನೆಂದು ಭಾವಿಸಿ, ಆಗ ನಾನು ನಿನ್ನ ತಪ್ಪನ್ನು ತಿದ್ದಬಯಿಸಲಿಲ್ಲ

ತಾರೆ:—ನಿನ್ನ ಅಬಚಿಯನ್ನು ನಾನೂ ನೋಡಿದ್ದೆನು ನನ್ನ ಲಗ್ನದ ತರುವಾಯ ಅವಳು ನಾಲ್ಕಾರು ಸಾರೆ ಇಲ್ಲಿಗೆ ಬಂದಿದ್ದಳು

ಬಂಡೇರಾಯ:—ಅಹುದು. ನಾನವಳನ್ನು ಚನ್ನಾಗಿ ಬಲ್ಲೆನು.

ವಿಧವೆ:—ಗುಂಡೇರಾಯ, ಹೀಗೆನ್ನಬೇಡಪ್ಪಾ. ಇವಳು ನಿನ್ನ ಅಣ್ಣನ ಹೆಂಡತಿ. ಗಂಡನಿಗೆ ದೊರೆಯಬೇಕಾದದ್ದು ನಿನಗೆ ದೊರೆಯುತ್ತಿದೆಯಲ್ಲ? ಎಂದು ಮತ್ಸರಗ್ರಸ್ತಳಾಗಿದ್ದಾಳೆ. ನಿನ್ನ ಮನಸ್ಸಿನಲ್ಲಿ ವಿಷದ ಬೀಜವ ನ್ನೂರುತ್ತಿದ್ದಾಳೆ.

ಬಂಡೇರಾಯ:—ಅತ್ತಿಗೆಯು ಹೇಳಿದ್ದು ನಿಜ. ನೀನು ಸುಳ್ಳಾಡುತ್ತಿ ರುವೆ. ಈಗ್ಗೆ ನಾಲ್ಕಾರು ವರ್ಷಗಳ ಹಿಂದೆ ಸ್ವಾತಿಯ ಮಳೆಯು ಹತ್ತಿತ್ತಲ್ಲ? ಆ ಮಳೆಯ ಸಮಯದಲ್ಲಿ ನನ್ನ ಅಬಚಿಯು ಇದೇ ಮನೆಯಲ್ಲಿ ಸಿಕ್ಕು ಸತ್ತು ಹೋದಳು.

ವಿಧವೆ:—ಸ್ವಾತಿಯ ಮಳೆಯಲ್ಲಿ ಬೀಳುತ್ತಿದ್ದ ಮನೆಯಲ್ಲಿ ಸಿಕ್ಕ ವಳು ನಾನೇ; ಆದರೆ ಸಾಯಲಿಲ್ಲ. ಹಲವರು ಬಹು ಶ್ರಮಬಟ್ಟು ಅಂದು ನನ್ನ ಜೀವವನ್ನುಳಿಸಿದರು.

ತಾರೆ:—ಇದ್ದರೂ ಇರಬಹುದು.

ಬಂಡೇರಾಯ (ಆತ್ಮಗತಂ):—ನಾನು ವೇಷಧಾರಿಯಾಗಿರುವುದರಿಂದ ಈಗ ಸತ್ಯಾಸತ್ಯತೆಯನ್ನು ನಿರ್ಣಯಿಸಬಯಿಸುವದು ಕಠಿಣವಾಗುವದು. (ಪ್ರಕಾಶವಾಗಿ) ಆಗಲಿ. ನಿನ್ನಲ್ಲಿ ವಂಶಾವಳಿಯಿದೆಯೆ? ವಂಶಾವಳಿಯನ್ನು ತಂದು ನೀನು ನನ್ನ ಸೋದರತ್ತೆಯೆಂಬುದನ್ನು ಸಿದ್ಧಮಾಡಿ ಕೊಡು. ಇದಕ್ಕಾಗಿ ನಾನು ನಿನಗೆ ಎಂಟು ದಿನಗಳ ಅವಧಿ ಕೊಡುವೆನು. (ವಿಧವೆಯು ಹೋಗುವಳು)(ಕಮಲೆಯ ಕಡೆಗೆ ಮೋರೆ ಮಾಡಿ) ನೀನಾರು? ಹಾವ-ಭಾವಗಳನ್ನು ನಟಿಸುವ ಜಾಣ್ಮೆಯನ್ನು ಚನ್ನಾಗಿ ಕಲಿತಿರುವಂತೆ ತೋರುತ್ತಿದೆ!

ಕಮಲೆ:—ನೀವು ನನ್ನನ್ನು ಗುರತಿಸಲಿಲ್ಲವೆ? (ನಿಟ್ಟುಸಿರ ಬಿಡುವಳು) ಅದೇ ಮುಖ. ಅವೇ ಕಣ್ಣುಗಳು. ಅದೇ ಮೂಗು. ಅದೇ ಪರಿಚಿತ ಸ್ವರವು. ಹೀಗಿದ್ದು ನಿಮಗೆ ನನ್ನ ಪರಿಚಯು ಹತ್ತಲೊಲ್ಲದೆ?

ಬಂಡೇರಾಯು:—ನಿಜವಾಗಿಯೂ ನೀನಾರೆಂಬದನ್ನು ನಾನರಿಯೆನು!

ಕಮಲೆ:—ಪ್ರಾಣನಾಥ, ಕೈಹಿಡಿದ ಸತಿಯನ್ನು ಅಲ್ಪಾವಕಾಶವಲ್ಲ ಮರೆದು ಬಿಡುವುದೇ? ಒಳ್ಳೇ ನಾಚಿಕೆಗೇಡಿ ಕೆಲಸ! (ಹತ್ತಿರ ಹೋಗಿ) ನೋಡಿರಿ. ದಿಟ್ಟಿಸಿ ನೋಡಿರಿ. ಆ ಮುನ್ನಿನ ಪ್ರಣಯದ ಮಾತುಗಳನ್ನು ಸ್ಮರಿಸಿಕೊಳ್ಳಿರಿ. ನಾಥ, ಈಗಲೂ ತಮಗೆ ಪತಿವಿರಹದಿಂದ ಕೊರಗುತಿದ್ದ ಈ ದೀನೆಯ ಗುರತು ಹತ್ತಲೊಲ್ಲದೆ?

ಬಂಡೇರಾಯು:—ಇಲ್ಲ. ಈಗಲೂ ನನಗೆ ನಿನ್ನ ಗುರತು ಹತ್ತಲೊಲ್ಲದಾಗಿದೆ!

ಕಮಲೆ:—ಪ್ರಾಣಪ್ರಿಯು, ನೀವು ನಿಮ್ಮ ಈ ಮಾತುಗಳಿಂದ ನನ್ನನ್ನು ಹೆಚ್ಚಾಗಿ ಬೆರಗುಗೊಳಿಸಿದಿರಿ! ಇನ್ನು ಈ ಪರಿಹಾಸವು ಸಾಕು! ಬಹು ದಿನ ಪತಿ ವಿರಹವನ್ನನುಭವಿಸಿ ಕುಂದಿ, ಪತಿಯ ಶೋಧ ಮಾಡುತ್ತ ತೊಳಲಿ ಬಳಲಿ ಬೆಂಡಾಗಿ ಬಂದ ಸಾಧ್ವಿಯನ್ನು ಹೀಗೆ ಉಪೇಕ್ಷಿಸುವುದೆ? ಈ ಸತಿಯೊಡನೆ ಹುಡುಗಾಟಿಕೆಯು ಮಾತ ಬಳಸಿ ವ್ಯರ್ಥ ಕಾಲಹರಣ ಮಾಡುತ್ತ ಇವಳ ಮನಸ್ಸನ್ನು ನೋಯಿಸಬೇಕೆ? (ಬಂಡೇರಾಯನು ವಿಸ್ಮಯಾತಿರೇಕದಿಂದ ಒಮ್ಮೆ ಕಮಲೆಯ ಕಡೆಗೂ, ಮತ್ತೊಮ್ಮೆ ತಾರೆಯ ಕಡೆಗೂ ನೋಡಿದನು. ತಾರೆಯು

ಇಂಗಿತ ಮಾಡಿದಳು.) ಪ್ರಿಯ, ಈ ನನ್ನ ಮುಖವನ್ನು ನೋಡಿರಿ. ಈ ಬಾಹುಗಳನ್ನು ನೋಡಿರಿ. ಈ ಕೇಶಗುಚ್ಛವನ್ನು ಚನ್ನಾಗಿ ನಿರೀಕ್ಷಿಸಿರಿ. ನಿಮಗೆ ನನ್ನ ಗುರತು ಹತ್ತಲೇಬೇಕು. ದುಷ್ಯಂತನು ಶಕುಂತಲೆಯನ್ನು ಮರೆದು, ತಾನೇ ತಾನಾಗಿ ಮನೆಗೆ ನಡೆದು ಬಂದ ಮಡದೀಮಣಿಯನ್ನು ಹೀಯಾಳಿಸಿ, ಹಿಂದುಗಡೆ ಪಶ್ಚಾತ್ತಾಪಕ್ಕೊಳಗಾದ ಕತೆಯನ್ನು ನೀವು ಕೇಳಿಲ್ಲವೆ? ಹಾಗೆಯೆ ನೀವೂ ತಪ್ಪು ದಾರಿಯನ್ನು ತುಳಿಯುವದು ಸರಿಯಲ್ಲ!

ಬಂಡೇರಾಯ (ಮುಗುಳು ನಗೆಯಿಂದ):—ಪ್ರಿಯೆ, ಈಗ ತುಸ ಗುರತು ಹತ್ತಿದಂತಾಗುತ್ತಿದೆ. ನಿಲ್ಲು, ಚನ್ನಾಗಿ ನೋಡುವೆನು. (ತುಸ ಹೊತ್ತು ನೋಡುತ್ತ ನಿಲ್ಲುವನು.) ಓಹೋ! ಈಗ ಸಂಪೂರ್ಣ ಹೊಳೆಯಿತು. ಅವಳೇ ನೀನು. ಪ್ರಿಯೆ, ನಿನ್ನನ್ನಗಲಿ ಬಹು ದಿನಗಳಾದ್ದರಿಂದ ಹೀಗಾಯಿತು. ಈಗ ನೀನು ಬಹಳ ದೊಡ್ಡವಳಾಗಿರುವೆ. ರೂಪದಲ್ಲಿಯೂ ಕೊಂಚ ವ್ಯತ್ಯಸ ವಾಗಿದೆ.

ಕಮಲೆ:—ನಾಥ, ನಿಮಗೆ ಈಗ ನನ್ನ ಗುರತು ಹತ್ತಿತೆ? ನನ್ನ ಸೌಭಾಗ್ಯವೆನ್ನಬೇಕು!

ಬಂಡೇರಾಯ:—ಪ್ರಿಯೆ, ನೀನು ನಿನ್ನ ಆ ಮಲೆಯಾಳದ ಮನೆಯನ್ನು ಬಿಟ್ಟು ಇಲ್ಲಿಗೇಕೆ ಬಂದೆ? ನಿನಗೇನು ಬೇಕಾಗಿದೆ?

ಕಮಲೆ:—ನಾಥ, ಬಹು ಸೋಜಿಗದ ಪ್ರಶ್ನೆಯಿದು! ನಾಥನೆ, ನನಗೇನು ಬೇಕಾಗಿದೆಯೆಂಬದನ್ನು ಹೇಳಲಿಯಾ? ನನಗೆ ಬೇರೆ ಏನೂ ಬೇಡ. (ತೀರ ಹತ್ತಿರ ಬಂದು) ಲತೆಯು ಸಹಕಾರ ವೃಕ್ಷವನ್ನು ಅಪ್ಪುವಂತೆ, ನಾನು ನನ್ನೀ ಕೋಮಲ ಬಾಹುಗಳಿಂದ ನಿಮ್ಮನ್ನು ಬಂಧಿಸ ಬಯಿಸಿದ್ದೇನೆ. (ಮುಂದರಿಸುವಳು. ತಾರೆಯು ಕೋಪದೃಷ್ಟಿಯಿಂದ ನೋಡಿದಳು. ಬಂಡೇರಾಯನು ದೂರ ಸರಿದು ನಿಂತನು)

ಬಂಡೇರಾಯ:—ಪ್ರಿಯೆ, ಇದು ಏಕಾಂತಸ್ಥಳವಲ್ಲ. ಲಜ್ಜಾಹೀನರಾಗಿ ವರ್ತಿಸುವದು ಸರಿಯಲ್ಲ.

ಕಮಲೆ:—(ಹತ್ತಿರ ಹೋಗಿ) ನಾಥ, ಬಹುದಿವಸಗಳ ವಿರಹದ ತರುವಾಯದಲ್ಲಿ ಮತ್ತೆ ಸಮ್ಮಿಳಿತರಾಗಿದ್ದೇವೆ. ಈ ಮಹದಾನಂದದ ಪ್ರಸಂಗ

ದಲ್ಲಿ ಲಜ್ಜೆಯನ್ನು ಲಕ್ಷಿಸುವಂತಿಲ್ಲ. ಮಾನಾಪಮಾನಗಳ ವಿಚಾರ ಮಾಡುವಂತಿಲ್ಲ ಪ್ರಿಯಕರಾ! ವಿರಹಾತಿರೇಕದಿಂದ ಸಂತಪ್ತಳಾದ ಈ ಸಾಧ್ವಿಯು ಅಪ್ಪಿಕೊಳ್ಳಲಿಕ್ಕೆ ಧಾವಿಸಿ ಬಂದಾಗ ಹೀಗೆ ಸಂಕೋಚಗೊಂಡು ಹಿಂಜರಿಯ ಹತ್ತಿರುವುದು ಸರಿಯೆ? ಇದರಿಂದ ನನಗೆಂತಹ ವ್ಯಥೆಯಾಗಬಹುದೆಂಬದನ್ನು ಯೋಚಿಸಿ ನೋಡಿರಿ

ಬಂಡೇರಾಯ:—ಅತ್ತಿಗೆ, ಇಲ್ಲಿಗೆ ಬಹಳವಾಗಿ ದಣಿದು ಬಂದ ನಾನು ಸಂಕಟಕ್ಕೊಳಗಾಗಿರುವೆನು. ಈ ಪ್ರಸಂಗದಲ್ಲಿ ಹೇಗೆ ವರ್ತಿಸಬೇಕೆಂಬದು ನನಗೆ ತಿಳಿಯದಾಗಿದೆ!

ಕಮಲೆ:—ಇದು ಸಂಕಟವೆ? ಪ್ರಾಣಪ್ರಿಯ, ಬಹು ದಿವಸಗಳ ತರುವಾಯ ಆದ ಪುನರ್ಮಿಲನದಲ್ಲಿ, ಮಾಡಿಕೊಂಡ ಹೆಂಡತಿಯು ಆಲಿಂಗನ ಸುಖವನ್ನು ಬಯಿಸಿ ಬಂದಿರುವುದು ನಿಮಗೆ ಗಂಡಾಂತರವಾಗಿ ತೋರುವುದೆ? ಹೀಗೆ ವಿಚಿತ್ರ ಸ್ವಭಾವಕ್ಕೊಳಗಾಗ ಬೇಡಿರಿ. ನನ್ನ ಮನೋರಥವನ್ನು ಪೂರ್ಣ ಮಾಡಿರಿ.

ತಾರೆ:—ತಂಗೀ, ಹೀಗೆ ದುಡುಕಬೇಡ. ಶಾಂತಳಾಗು. ಇನ್ನು ನಿನ್ನ ಪತಿಯು ನಿನ್ನನ್ನಗಲುವಂತಿಲ್ಲ. ಬಹು ದೂರದ ಪ್ರವಾಸ ಮಾಡಿ ಬೇಜಾರಗೊಂಡು ಬಂದಿದ್ದಾನೆ. ಅವನು ಮೊದಲು ವಿಶ್ರಾಂತಿಯನ್ನು ಪಡೆದು ಸಮಾಧಾನ ಹೊಂದಲಿ.

ಕಮಲೆ:—ಎಷ್ಟಾದರೂ ನೀನು ಹೆಂಗಸು. ಈಗಾಗಲೆ ಮತ್ಸರಗ್ರಸ್ತಳಾಗಿರುವಂತೆ ಕಾಣುತ್ತಿದೆ. ಅಕ್ಕಾ, ಈಗ ನಾನು ನನ್ನ ಈ ಪತಿದೇವರನ್ನು ಪೀಡಿಸುತ್ತಿರುವೆನೆ? ಇವರ ವಿಶ್ರಾಂತಿಗೆ ವ್ಯತ್ಯಯವನ್ನುಂಟು ಮಾಡಿರುವೆನೆ? ಯೋಚಿಸಿ ನೋಡು! ನನ್ನ ಸ್ಥಳದಲ್ಲಿ ನೀನಿದ್ದರೆ, ಪತಿಯ ಈ ವಿಚಿತ್ರ ವರ್ತನವನ್ನು ನೋಡಿ, ವ್ಯಥಾತಿರೇಕದಿಂದ ಮೆಯ್ಮರೆಯುತ್ತಿದ್ದಿಲ್ಲವೆ?

ಬಂಡೇರಾಯ:—ಒಳ್ಳೇ ಪೀಕಲಾಟ! ಹೇಗೆ ವರ್ತಿಸಿದರೂ ಪೇಚು!

(ವಿಧವೆಯು ಪ್ರವೇಶಿಸುವಳು.)

ವಿಧವೆ:—ಅಪ್ಪಾ, ಗುಂಡೇರಾಯ, ಇವರಿಬ್ಬರೂ ನಿನ್ನನ್ನು ಕಾಡ ಹತ್ತಿದ್ದಾರೆ. ಇಬ್ಬರ ಉಸಾಬರಿಯನ್ನು ಬಿಟ್ಟು, ನಾನು ಕರೆದತ್ತ ಬಾ.

ನಿನಗೆ ವಿರಾಮವಾಗುವಂತೆ ಮಾಡುವೆನು.

ಬಂಡೇರಾಯ (ಆತ್ಮಗತಂ):—ಇದೊಂದು ಪೀಡೆ ಮತ್ತೆ ಬಂದಿತೆ? ನನ್ನ ಅವಸ್ಥೆ ನೆಟ್ಟಗಿಲ್ಲ! ಆಗಲಿ. ಏನಾಗುವದೋ ನೋಡೋಣ.

(ಆಲೋಚಿಸುತ್ತ ನಿಲ್ಲುವನು.)

(ಲಕ್ಷ್ಮೀವಕೀಲನು ಬರುವನು.)

ತಾರೆ:—ಬನ್ನಿರಿ. ವಕೀಲ ಸಾಹೇಬರೇ, ಹೀಗೆ ಬನ್ನಿರಿ.

ಲಕ್ಷ್ಮಿ:—ಬಂದಿರುವೆನು. ಒಂದು ಕುರ್ಚಿಯನ್ನು ತರಿಸಿ ಇಡಿಸಿರಿ. ನೆಲದ ಮೇಲೆ ಕೂಡಲಾರೆನು. (ತಾರೆಯು ಕುರ್ಚಿಯನ್ನು ತರಿಸುವಳು; ಲಕ್ಷ್ಮೀವಕೀಲನು ಕುಳಿತು) ಇವರಾರು?

ತಾರೆ:—ಇವನು ನನ್ನ ಮೈದುನ ಗುಂಡೇರಾಯ.

ಲಕ್ಷ್ಮಿ:—ಓಹೋ! ನೀವು ಗುಂಡೇರಾಯರೆ? ಒಳಿತಾಯಿತು. ನೀವು ವೃತ್ತ್ಯಪತ್ರದ ಸುದ್ದಿಯನ್ನು ಕೇಳಿರುವಿರಷ್ಟೆ?

ಬಂಡೇರಾಯ (ವಕೀಲನನ್ನು ದಿಟ್ಟಿಸಿ ನೋಡುವನು. ಬಳಿಕ ಅವನ ಹತ್ತಿರ ಹೋಗಿ ಮೈಮೇಲೆ ಕೈಯಾಡಿಸಿ ಪರೀಕ್ಷಿಸಿದನು.):-ದೂರದಿಂದ ನೋಡಲಾಗಿ ನಿಮ್ಮ ಮೈಯಲ್ಲಿ ಎಲುವುಗಳಿರಲಿಕ್ಕಿಲ್ಲವೆಂದೇ ನನಗೆ ಭಾಸವಾಯಿತು. ಕಾರಣ ಆಶ್ಚರ್ಯಾನ್ವಿತನಾಗಿ ನಿಮ್ಮ ಬಳಿಗೆ ಬಂದು ನೋಡಿದೆನು. ಕೋಪಗೊಳ್ಳದಿರಿ. ನೀವು ಜಗಳಗಂಟರಾಗಿ ಕಚೇರಿಗೆ ಬರುವವರ ರಕ್ತವನ್ನು ಚನ್ನಾಗಿ ಹೀರಿಕೊಂಡಿರುವಿರಿ!

ಲಕ್ಷ್ಮಿ:—ತಾರಾಬಾಯಿಯವರೆ, ನೋಡಿದಿರಾ ನಿಮ್ಮ ಮೈದುನನ ಕೃತಿಯನ್ನು? ನೋಡಿ, ಮಾತುಗಳನ್ನು ಕೇಳಿ, ನನಗೆ ಕೋಪವುಂಟಾಗದಿದ್ದೀತೆ? ಇವನು ನನ್ನ ಅಪಮಾನ ಮಾಡುತ್ತಿರುವನೆಂದು ನಿಮಗೆ ಅನಿಸುವದಿಲ್ಲವೆ? ಈಗ ಇವನು ಪಶ್ಚಾತ್ತಾಪವನ್ನು ಪ್ರಕಟಿಸಿ ಕ್ಷಮೆ ಬೇಡಿಕೊಂಡ ಹೊರತು, ನಾನಿಲ್ಲಿ ಕುಳ್ಳಿರಲಾರೆನು.

ತಾರೆ:—ಮೈದುನನೆ, ಹುಡುಗಾಟಿಕೆಯ ಸ್ವಭಾವವು ನಿನ್ನದು; ಆದರೆ ಈ ಹುಡುಗಾಟಿಕೆಯ ವರ್ತನವು ಎಲ್ಲ ಪ್ರಸಂಗಗಳಲ್ಲಿಯೂ ಉಪಯುಕ್ತವಲ್ಲ. ದೇಶ-ಕಾಲ-ಪಾತ್ರಗಳನ್ನು ತಿಳಿದು ವರ್ತಿಸುವದೇ ಭೂಷಣಾಸ್ಪದವು. ಈ

ವಕೀಲಸಾಹೇಬರು ನಮ್ಮೆಲ್ಲರಿಗಿಂತ ಹಿರಿಯರು. ಮೇಲಾಗಿ ಇವರಿಂದ ನಮ್ಮ ಕೋಟಿ ಕಲ್ಯಾಣವಾಗಬೇಕಾಗಿದೆ. ಇಂತಹ ಪ್ರಸಂಗದಲ್ಲಿ ಹಿರಿಯರೊಡನೆ ಹುಡುಗಾಟಿಕೆಯಾಡಬಯಸುವದು ಯೋಗ್ಯವಲ್ಲ. ವಕೀಲಸಾಹೇಬರಿಗೆ ನಮಸ್ಕಾರ ಮಾಡು. (ಬಂಡೇರಾಯನು ನಮಸ್ಕರಿಸುವನು)

ಲಕ್ಷ್ಮಿ:—ಈಗ ನನ್ನ ಸಿಟ್ಟು ಇಳಿಯಿತು. ಹೀಗೆ ಬಾ. ಇಲ್ಲಿ ಕುಳಿತುಕೊಳ್ಳು. ನೀನು ಸತ್ತು ಹೋಗಿರುವೆಯೆಂದು ನಾನು ಸುದ್ದಿಯು ಕೇಳಿದ್ದೆನು. ಇಲ್ಲಿಂದ ನೀನು ಮಲೆಯಾಳಕ್ಕೆ ಹೋಗಿ ಲಗ್ನ ಮಾಡಿಕೊಂಡಿದ್ದೆಯೆಂತೆ. ಮುಂದೆ ಆ ಡೊಣ್ಣೆಯು ಹೊಡತದಿಂದ ಮಡಿದು ಹೋದೆಯಂತೆ!

ಬಂಡೇರಾಯ:—ನಾನೇ ನಿಮ್ಮೆದುರಿನಲ್ಲಿರುವಾಗ ನಾನು ಸತ್ತು ಹೋಗಿಲ್ಲವೆಂಬ ಮಾತನ್ನು ನೀವು ಒಪ್ಪಲೇಬೇಕು. ನೀವು ಕೇಳಿದ ಉಳಿದ ಸಂಗತಿಗಳೆಲ್ಲವು ನಿಜವಾದವುಗಳು.

ಲಕ್ಷ್ಮಿ:—ಅಂದರೆ?

ಬಂಡೇರಾಯ:—ನಾನು ಮಲೆಯಾಳಕ್ಕೆ ಹೋದದ್ದು ಸತ್ಯ. ಅಲ್ಲಿಯ ಹೆಂಗಸನ್ನು ಲಗ್ನವಾದದ್ದೂ ನಿಜ ಅವಳಿಂದ ಬಡಿಗೆಯ ಬಡಿತವನ್ನು ತಿಂದದ್ದೂ ನಿಜ. ಆ ಅಪಘಾತದಲ್ಲಿ ನಾನು ಸಾಯತಕ್ಕವನೆ! ಆದರೆ ದೇವರ ಅನುಗ್ರಹದಿಂದಲೂ, ತಮ್ಮೆಲ್ಲರ ಆಶೀರ್ವಾದದಿಂದಲೂ ಬದುಕಿ ಪಾರಾದೆನು.

ತಾರೆ:—ವಕೀಲಸಾಹೇಬರೇ, ಇವನು ಏಕಮಾತ್ರ ನಮ್ಮ ವಂಶದೀಪಕನು. ಚೇಷ್ಟೆಕೋರನಾದರೂ ಒಳ್ಳೆಯ ಸ್ವಭಾವದವನು. ನೀವು ಇವನ ವಿಷಯದಲ್ಲಿ ಪ್ರಸನ್ನರಾಗಿರಿ ತಕ್ಕ ಸಹಾಯ ಮಾಡಿರಿ. ಇವನೊಬ್ಬನು ಜೀವಿಸಿರದಿದ್ದರೆ, ಆ ಲಕ್ಷ ರೂಪಾಯಿಗಳು ವಾರಸದಾರರನ್ನು ಹೊಂದದೆ, ಸರಕಾರಕ್ಕೆ ಸಲ್ಲುತ್ತಿದ್ದವಲ್ಲವೆ?

ಲಕ್ಷ್ಮಿ:—ನಿಮಗೆ ಹೀಗೆ ಹೇಳಿದವರಾರು? ಇವನು ಜೀವಿಸಿರದಿದ್ದರೂ ನೀವು ಭಯಗೊಳ್ಳುವ ಕಾರಣವಿದ್ದಿಲ್ಲ. ಇಲ್ಲಿ ಮೃತ್ಯುಪತ್ರವಿದೆ, ನೋಡಿರಿ. (ಮೃತ್ಯುಪತ್ರವನ್ನು ಹೊರದೆಗೆದು)....ಗುಂಡೇರಾಯನು ಜೀವಿಸದಿರದಲ್ಲಿ ಈ ಮೃತ್ಯುಪತ್ರದಲ್ಲಿ ಉಲ್ಲೇಖಿಸಲ್ಪಟ್ಟ ಆಸ್ತಿಯು ಬಂಡೇರಾಯನ ಹೆಂಡತಿಗೆ ದೊರೆಯುಬೇಕು.........

ಬಂಡೇರಾಯ:—ಅಂ ಏನಂದಿರಿ? (ವಿಸ್ಮಯಾತಿರೇಕವನ್ನು ತೋರಿಸುವನು.)

ತಾರೆ:—ವಕೀಲಸಾಹೇಬರೇ,........

ಲಕ್ಷ್ಮಿ:—ಏಕೆ? ಏನಾಯಿತು? ನೀವು ಹೀಗೆ ಗಾಬರಿಯಾದದ್ದೇಕೆ?

ತಾರೆ:—ಈ ಸಂಗತಿಯನ್ನು ನೀವು ನನಗೆ ಮೊದಲೇ ತಿಳುಹಿದ್ದರೆ ಎಷ್ಟು ನೆಟ್ಟಗಾಗುತ್ತಿತ್ತಲ್ಲ! ಇಷ್ಟೊಂದು ಖಟಾಟೋಪವನ್ನೆಬ್ಬಿಸುವ ಕಾರಣವೇ ಇರಲಿಲ್ಲ.

ಬಂಡೇರಾಯ:—ತುಂಗಭದ್ರೆಯಲ್ಲಿ ಹಾರಿಕೊಂಡು ಸಾಯುವುದು....

ಲಕ್ಷ್ಮಿ:—ನೀವೇನೆನ್ನುವಿರೋ ನನಗೆ ತಿಳಿಯಲೊಲ್ಲದು. ಸ್ಪಷ್ಟವಾಗಿ ಮಾತಾಡಿರಿ.

ತಾರೆ:—ವಕೀಲರೇ, ಮತ್ತೇನಿಲ್ಲ! ಇವರು ತುಂಗಭದ್ರೆಯಲ್ಲಿ ಬಿದ್ದು ಹೋದುದನ್ನು ನೀವು ಬಲ್ಲಿರಷ್ಟೇ? ನಾನು ಖರ್ಚಿಕಳು. ಯಾವ ಕೆಲಸವಾದರೂ ವಿಶೇಷ ಸಮಾರೋಹದಿಂದ ನಡೆಯಬೇಕೆಂಬುದು ನನ್ನ ಇಚ್ಛೆ. ಮೃತ್ಯುಪತ್ರದ ಯಾವತ್ತು ಸಂಗತಿಯು ಮೊದಲೇ ನನಗೆ ತಿಳಿದಿದ್ದರೆ, ಇವರ ಉತ್ತರಕ್ರಿಯೆಯನ್ನು ಇದಕ್ಕೂ ಹೆಚ್ಚು ಆಡಂಬರದಿಂದ ಮಾಡಿಸುತ್ತಿದ್ದೆನು. ಲಕ್ಷ ರೂಪಾಯಿಗಳು ನನಗೇ ದೊರೆಯುವವೆಂದು ಆಗ ನನಗೆ ಗೊತ್ತಾಗಿದ್ದರೆ, ಬಹು ಜನರು ಬೆರಳ ಕಚ್ಚಿಕೊಳ್ಳುವಂತೆ ವೆಚ್ಚ ಮಾಡುತ್ತಿದ್ದೆನು.

ಬಂಡೇರಾಯ:—ಅತ್ತಿಗೆ, ಈ ಹಾಳು ಹರಟೆಯಿಂದ ಈಗ ಪ್ರಯೋಜನವಿಲ್ಲ. ವಕೀಲಸಾಹೇಬರೇ, ಆ ರೂಪಾಯಿಗಳು ನನಗೆ ಯಾವಾಗ್ಗೆ ದೊರೆಯುವವೆಂಬದನ್ನು ಹೇಳಿರಿ.

ಲಕ್ಷ್ಮೀ:—ಈಗ ನೀನು ವಕೀಲೀಪತ್ರಕ್ಕೆ ಸಹಿ ಮಾಡಿಕೊಡು. ಮುಂದೆ ನಾನು ಕೆಲಸ ನಡಿಸುವೆನು. ನೀನು ಗುಂಡೇರಾಯನೆಂಬದು ಸಿದ್ಧವಾದ ಬಳಿಕ, ಆ ಹಣವು ನಿನಗೆ ದೊರೆಯುವದು.

ಬಂಡೇರಾಯ:—ಹೀಗಾಗಲಿಕ್ಕೆ ಕಾಲಾವಧಿಯು ಎಷ್ಟು ಬೇಕಾದೀತು?

ಲಕ್ಷ್ಮಿ:—ಕನಿಷ್ಟಪಕ್ಷಕ್ಕೆ ಒಂದೆರಡು ವರ್ಷಗಳು ಬೇಕು.

ತಾರೆ:—ಇಷ್ಟು ಕಾಲವೇಕೆ ಬೇಕು? ಇವನು ಗುಂಡೇರಾಯನಲ್ಲವೆಂದು ಹೇಳುವವರಾರು?

ಲಕ್ಷ್ಮಿ:—ತಾರಾಬಾಯಿಯವರೆ, ಕೋರ್ಟಿನ ಕೆಲಸವಿದು. ಯಾವಾಗಲೂ ಗಜಗಮನದಿಂದ ನಡೆಯತಕ್ಕದ್ದು. ಅಜ್ಜನು ಅರ್ಜಿಯನ್ನು ಕೊಡಬೇಕು; ತಂದೆಯು ಖಟ್ಲೆಗೆ ಹಾಜರಿರಬೇಕು; ಮಗನು ಅದರ ಪರಿಣಾಮವನ್ನನುಭವಿಸಬೇಕು!

ಬಂಡೇರಾಯ:—ಹೀಗಿದ್ದರೆ ನಾನು ಈಗ ಈ ಪ್ರಪಂಚದ ವೆಚ್ಚವನ್ನು ಹೇಗೆ ಸಾಗಿಸಲಿ? ಅಣ್ಣನ ಮರಣವಾರ್ತೆಯನ್ನು ಕೇಳುತ್ತಲೆ ಯಾವ ವಿಚಾರವನ್ನೂ ಮಾಡದೆ ಹೊರಟು ಬಂದೆನು ನಾನು ಮುಂಬಯಿಯ ಬ್ಯಾಂಕಿನಲ್ಲಿ ಸಾವಿರಾರು ರೂಪಾಯಿಗಳನ್ನು ಇರಿಸಿರುವೆನಾದರೂ, ಅವು ನನ್ನ ಹೊತ್ತಿಗೆ ಒದಗುವ ಸಂಭವವಿಲ್ಲ.

ಲಕ್ಷ್ಮಿ:—ಮುಂದೆ ಏನಾಗುವದೋ ನೋಡೋಣ. ಈಗ ನಾನು ಹೋಗಿ ಬರುವೆನು. ನಾನು ನಿರುದ್ಯೋಗದಲ್ಲಿ ಅರೆಕ್ಷಣವನ್ನು ಸಹ ಕಳೆವವನಲ್ಲ. ಮನೆಯಲ್ಲಿ ನಾಲ್ಕಾರು ಗಿರಾಕಿಗಳು ಬಂದು ನನ್ನ ಮಾರ್ಗಪ್ರತೀಕ್ಷೆ ಮಾಡುತ್ತ ಕುಳಿತಿರಬಹುದು (ಕಿಸೆಯೊಳಗಿನ ಗಡಿಯಾರವನ್ನು ತೆಗೆದು ನೋಡಿ) ಓಹೋ! ಆರು ಗಂಟೆಯಾಯಿತು. ಬಹಳ ತಡವಾಗಿ ಹೋಯಿತು. ಇನ್ನು ಒಂದು ಮಿನೀಟು ಸಹ ಇಲ್ಲಿ ಕುಳ್ಳಿರುವಂತಿಲ್ಲ. (ಕಮಲೆಯ ಕಡೆಗೆ ನೋಡಿ) ಇವಳಾರು? ಹೊಸಬಳಿರುವಂತೆ ಕಾಣುತ್ತಾಳೆ. ನೀನು ಸಂಗಡ ಕರಕೊಂಡು ಬಂದಿರುವೆಯಾ?

ಬಂಡೇರಾಯ:—ಇಲ್ಲ. ನಾನಿಲ್ಲಿಗೆ ಬಂದ ಬಳಿಕ ಇವಳನ್ನು ಕಂಡೆನು.

ತಾರೆ:—ಇವಳು ಗುಂಡೇರಾಯನಿಗಿಂತ ಮೊದಲು ಬಂದಿದ್ದಾಳೆ. ಮಳೆಯ ಪೂರ್ವದಲ್ಲಿ ಗುಡುಗು-ಮಿಂಚುಗಳ ಅಭ್ರಾಟ ನಡೆಯುವಂತೆ, ಮನೆಯ ಮಾಲಕರ ಆಗಮನದ ಮೊದಲು ಪಾರಿವಾರಿಕ ಜನರ ಹಾವಳಿಯು ನಡೆದಿದೆ.

ಲಕ್ಷ್ಮಿ:—ಇದರರ್ಥವು ನನಗೆ ಹೊಳೆಯಲಿಲ್ಲ.

ಕಮಲೆ:—ನಾನು ಹೇಳುವೆನು ಕೇಳಿರಿ. ನಾನು ಇವರ....

ಲಕ್ಷ್ಮಿ:—ಮುಂದೇನು?

ಕಮಲೆ:—ನಿಮಗೆ ಹೊಳೆಯಲಿಲ್ಲವೆ? ನಾನು ಇವರ ಅರ್ಧಾಂಗಿನಿಯು.

ಲಕ್ಷ್ಮಿ:—ಗುಂಡೇರಾಯನು ಮಲೆಯಾಳದಲ್ಲಿ ಲಗ್ನ ಮಾಡಿಕೊಂಡದ್ದನ್ನು ನಾನು ಕೇಳಿದ್ದೇನೆ.

ಕಮಲೆ:—ಅಹುದು. ನಾನೇ ಮಲೆಯಾಳದವಳು ಒಂದು ದಿನ ನನಗೂ ಇವರಿಗೂ ಕಲಹವಾಯಿತು ಅಂದು ಕೋಪಗೊಂಡು ಮನೆ ಬಿಟ್ಟು ಹೋದವರದು ಇಂದಿನ ವರೆಗೂ ದರ್ಶನವಿರಲಿಲ್ಲ. ವಿರಹಾಕುಲಿತಳಾದ ನಾನು ಹುಡುಕುತ್ತ ಹೊರಟು, ಇಂದು ಪತಿಸಮಾಗಮವನ್ನು ಹೊಂದಿದೆನು.

ಲಕ್ಷ್ಮಿ:—ಸ್ತ್ರೀ ರತ್ನವನ್ನು ತ್ಯಜಿಸಲಾಗದು. ಮಲೆಯಾಳದ ಹೆಂಗಸರು ಗಟ್ಟಿಗರು. ಸ್ವಾತಂತ್ರ್ಯಪ್ರಿಯರು. ಇಲ್ಲಿಯವರಂತೆ ಪುರುಷರ ಅವಿವೇಕತೆಯನ್ನು ಶಾಂತತೆಯಿಂದ ಸಹಿಸರು. ಗುಂಡೇರಾಯ, ನೀನು ಕೊಂಚ ಸಾವಧಾನತೆಯಿಂದಿರು ಮತ್ತೆ ಕಲಹವೇಳದಂತೆಯೂ, ಬಡಿಗೆಯ ಹೊಡತವನ್ನು ತಿನ್ನುವ ಪ್ರಸಂಗವೇಳದಂತೆಯೂ ಜಪ್ಪಿಸಿರು. ಇನ್ನು ನಾನು ಹೋಗುವೆನು. (ಏಳುವನು.)

ಬಂಡೇರಾಯ:—ವಕೀಲ ಸಾಹೇಬರೆ, ಸ್ವಲ್ಪ ತಡೆಯಿರಿ. ವರ್ತಮಾನ ಪತ್ರಗಳಲ್ಲಿ ಜಾಹೀರಾತು ಕೊಟ್ಟು ನೀವು ನನ್ನನ್ನು ಬರಮಾಡಿಕೊಂಡಿರಿ. ನಾನು ನಿಮ್ಮ ಮೇಲೆ ವಿಶ್ವಾಸವಿಟ್ಟು ಬಂದುಬಿಟ್ಟೆನು. ನನ್ನ ಮುಂದಿನ ಗತಿಯೇನು? ಲಕ್ಷ ರೂಪಾಯಿಗಳ ಸುದ್ದಿಯನ್ನು ಕೇಳುತ್ತಲೆ, ದೂರದೂರದ ಆಪ್ತರು ತಮ್ಮ ಪ್ರೇಮವನ್ನು ಜಾಗ್ರತಗೊಳಿಸಿಕೊಂಡು ಹಿಂಡುಗಟ್ಟಿ ಬರಹತ್ತಿದ್ದಾರೆ ನಾನು ಬಾಳುವೆಯನ್ನು ಹೇಗೆ ಸಾಗಿಸಲಿ?

ಲಕ್ಷ್ಮಿ:—ನೀನು ಚಿಂತಿಸದಿರು. ಹೇಗಿದ್ದರೂ ನಿನ್ನ ಲಕ್ಷ ರೂಪಾಯಿಗಳು ಬರತಕ್ಕವಿರುವವು. ನಿನಗೆ ಬೇಕಾದಾಗ ನನ್ನ ಮನೆಗೆ ಬಂದು ರೂಪಾಯಿಗಳನ್ನು ತಕ್ಕೊಂಡು ಹೋಗು. ಆ ಲಕ್ಷ ರೂಪಾಯಿಗಳು ಬಂದ ಬಳಿಕ ಈಗ ಕೊಡುತ್ತಿರುವ ಸಾಲವನ್ನು ತೀರಿಸಿಕೊಳ್ಳುವೆನು. ನಾನು ಗಿರಾಕಿಗಳಿಗೆ ಎಲ್ಲ ರೀತಿಯಿಂದ ಸಹಾಯ ಮಾಡಲಿಕ್ಕೆ ಬದ್ಧಕಂಕಣನು. ನಾನು ಹೇಗೆ ಪಕ್ಷಕಾರರಿಂದ ವಸೂಲ ಮಾಡಿಕೊಳ್ಳಬಲ್ಲೆನೋ, ಹಾಗೆ ಪಕ್ಷಗಾರರಿಗೆ ಸಾಲ ಕೊಡುವುದರಲ್ಲೂ ಮುಕ್ತಹಸ್ತನು. (ಹೋಗುವನು)

ತಾರೆ:—ಪ್ರಿಯ ಮೈದುನನೆ, ಇನ್ನು ನಾವು ಅಂತಸ್ತಿನ ಮೇಲಿನ ಕೋಣೆಗೆ ಹೋಗೋಣ. ನೀನು ಕೈಕಾಲುಗಳನ್ನು ತೊಳೆದುಕೊಂಡು ತುಸ ವಿಶ್ರಮಿಸು. ನಾನು ಉಪಾಹಾರವನ್ನೂ ಚಹವನ್ನೂ ತಂದು ಕೊಡುವೆನು. ಕೆಂಚ, ಇವನ ಹಾಸುಗೆಯ ಸುರುಳಿಯನ್ನು ಅಂತಸ್ತಿನ ಮೇಲಿನ ಕೋಣೆಯಲ್ಲಿರಿಸು.

ಕಮಲೆ:—ಹಾಗಾದರೆ ನನ್ನ ಹಾಸುಗೆಯನ್ನೂ ಆ ಕೋಣೆಯಲ್ಲೇ ಇರಿಸೆಂದು ಹೇಳು.

(ತಾರೆಯೂ ಬಂಡೇರಾಯನೂ ಒಬ್ಬರೊಬ್ಬರ ಕಡೆಗೆ ನೋಡುವರು)

ಬಂಡೇರಾಯ:—ಅತ್ತಿಗೆ, ಇವಳು ನನ್ನನ್ನು ಎಳೆಯುತ್ತಿರುವಳು.

ತಾರೆ:—ಮೈದುನನನ್ನು ಹೀಗೆ ಪೀಡಿಸಬೇಡ. ಅವನಿಗೆ ವಿಶ್ರಾಂತಿ ದೊರೆಯುವಂತೆ ಮಾಡು.

ಕಮಲೆ:—ಅಕ್ಕಾ, ಇವರು ನನ್ನ ಪ್ರಾಣಪತಿಗಳು. ಇವರ ಮೇಲೆ ನಿನಗಿಂತಲೂ ನನ್ನ ಹಕ್ಕು ಹೆಚ್ಚಾಗಿದೆ. ನೀನು ನಡುವೆ ಬಾಯ ಹಾಕಿ ಮಾತಾಡಬೇಡ. (ಎಲ್ಲರೂ ಹೋಗುವರು)

---

## ೫ನೆಯ ಪ್ರವೇಶ.

[ಬಂಡೇರಾಯನಿರುವನು.]

ಬಂಡೇ:—ನಾನು ಮಾಡಬಯಸಿದ್ದೊಂದು! ಆದದ್ದು ಮತ್ತೊಂದು! ಕಠಿಣವಾದ ಸಂಕಟವು ಪ್ರಾಪ್ತವಾಗಿದೆ. ಇದರಿಂದ ಪಾರಾಗುವದೆಂತು? ಬಂಡೇರಾಯನಾಗಿದ್ದ ನಾನು ಗುಂಡೇರಾಯನಲ್ಲಿ ರೂಪಾಂತರ ಹೊಂದುತ್ತಲೆ ಲಕ್ಷ ರೂಪಾಯಿಗಳನ್ನು ಹೊಂದಿ ಸುಖಿಸಬಹುದೆಂದು ಭಾವಿಸಿದ್ದೆನು. ಆ ಲಕ್ಷ ರೂಪಾಯಿಗಳು ಯಾವಾಗ್ಗೆ ದೊರೆಯುವವೊ ಏನೊ! ಈಗ ನನಗಿದರ ಚಿಂತೆಯಿಲ್ಲ. ನನ್ನ ಜನ್ಮಶನಿಯೋಪಾದಿಯಲ್ಲಿ ರಮಣೀರತ್ನವೊಂದು ಗಂಟುಬಿದ್ದಿದೆ. ಈ ಜನ್ಮಶನಿಯ ಪೀಡೆಯಿಂದ ಪಾರಾಗುವುದು ಹೇಗೆ? ಎಲ್ಲಿಯವಳೊ ಏನೊ? ಹೆಂಡತಿಯೆಂದು ಹೇಳಿಕೊಳ್ಳುತ್ತಿದ್ದಾಳೆ! ಪರಪುರುಷರಿಗೆ ಪತಿಯೆಂದು ಹೇಳಿಕೊಂಡು ಪ್ರೇಮಾಭಿನಯವನ್ನು ತೋರಿಸುತ್ತಿರುವ

ಈ ಹೆಂಗಸು, ತೀರ ಹೀನಳಾಗಿರಬೇಕೆಂಬದರಲ್ಲಿ ಸಂದೇಹವಿಲ್ಲ. ಈ ಅಭಿನಯದಲ್ಲಿ ಇವಳ ಉದ್ದೇಶವೇನಿರಬಹುದು? ಇವಳೂ ನನ್ನಂತೆಯೇ ಲಕ್ಷರೂಪಾಯಿಗಳ ಮೋಹಕ್ಕೊಳಗಾಗಿ ಹೀಗೆ ನಟಿಸುತ್ತಿರಬಹುದು! ಯಾವಾಗಲೂ ನನ್ನನ್ನು ಕಾಯ್ದುಕೊಂಡಿರುವಳು. ಒನಪು-ಒಯ್ಯಾರಗಳಿಂದ ನನ್ನನ್ನು ಸಂತೋಷಗೊಳಿಸಲು ಪ್ರಯತ್ನಿಸುವಳು; ಆದರೆ ನಾನು ಇವಳ ದಾಂಭಿಕತನಕ್ಕೆ ಬಲಿಬೀಳತಕ್ಕವನಲ್ಲ. ನಾನು ತಾರೆಯೊಡನೆ ತಾಸೆರಡು ತಾಸು ಏಕಾಂತದಲ್ಲಿ ಮಾತಾಡಿ, ಮುಂದಿನ ಕಾರ್ಯಕ್ರಮವನ್ನು ನಿರ್ಧರಿಸಬೇಕೆಂದು ಪ್ರಯತ್ನಿಸುತ್ತಿದ್ದೇನೆ; ಆದರೆ ಈ ಕ್ಷುದ್ರ ಹೆಂಗಸು ನನ್ನ ಬೆನ್ನ ಹತ್ತಿ ಬಿಟ್ಟಿದ್ದಾಳೆ. ಒಂದು ಕ್ಷಣ ಸಹ ನನಗೆ ಏಕಾಂತವು ದೊರೆಯದಾಗಿದೆ. ಏನು ಮಾಡಲಿ? ನಾನು ವೇಷಾಂತರದಲ್ಲಿದ್ದುದರಿಂದ ಈ ಕ್ಷುಲ್ಲಕ ಹೆಂಗಸಿನ ಹುಳಕನ್ನು ಬೈಲಿಗೆಳೆಯುವಂತಿಲ್ಲ; ಮನೆಬಿಟ್ಟು ಓಡಿಸುವಂತಿಲ್ಲ. ಆಗಲಿ. ಯಾವದೊಂದು ಹಂಚಿಕೆಯನ್ನು ಹುಡುಕಿ ಈ ವಿಪತ್ತಿನಿಂದ ಪಾರಾಗಲಿಕ್ಕೆ ಬೇಕು. ಅದೊ, ಅಲ್ಲಿ ಕಮಲೆಯು ಬರುತ್ತಿರುವಳು. ನಾನು ಸೌಮ್ಯ ರೀತಿಯಿಂದ ವರ್ತಿಸಿ, ಕಾರ್ಯ ಸಾಧಿಸಿಕೊಳ್ಳಲಿಕ್ಕೆ ಯತ್ನಿಸುವೆನು.

(ಕಮಲೆಯು ಬರುವಳು)

ಕಮಲೆ:—ನನ್ನನ್ನು ತಪ್ಪಿಸಿ ಇಲ್ಲಿಗೆ ಬಂದಿರುವಿರಾ? ಎಂತಹ ನಿರ್ದಯರು ನೀವು? (ಎಳೆಯುವಳು)

ಬಂಡೇರಾಯ:—ಮಹಾರಾಯಳೆ, ನಾನು ಹೇಗೇ ಇರಲಿ. ನೀನು ಮಾತ್ರ ನಿರ್ದಯಳಾಗಬೇಡ! ನಿನ್ನ ಎಳತದಿಂದ ನನಗೆ ಬಲವಾದ ಪೆಟ್ಟು ತಗಲಿತು. ದಯವಿಟ್ಟು ದೂರದಲ್ಲಿದ್ದೇ ಮಾತನಾಡು!

ಕಮಲೆ:—ಎಂತಹ ಅರಸಿಕರು ನೀವು! ಕೋಮಲೆಯಾದ ನಾನು ಕೊಂಚ ಮೈಯ ಮುಟ್ಟದರೆ, ನಿಮಗೆ ಪೆಟ್ಟು ತಗಲಿತೆ?

ಬಂಡೇರಾಯ:—ನೀನು ಕೋಮಲೆಯೋ-ಕಠೋರಳೋ ನಾನರಿಯೆನು। ಆದರೆ ನಿನ್ನ ಈ ಎಳತವು ಮಾತ್ರ ಕೋಮಲವಾದದ್ದಲ್ಲ! ಪ್ರಿಯೆ, ಬಹು ದಿವಸ ನಿನ್ನನ್ನಗಲಿದ್ದುದರಿಂದ ಮೊದಲಿನ ಅಭ್ಯಾಸವು ಮರೆದು ಹೋಗಿದೆ. ಕಾರಣ ಈಗ ನೀನು ನಿನ್ನ ಪ್ರೇಮಾಭಿನಯದ ಎಳತವನ್ನು ಕೊಂಚ ಶಿಥಿಲ

ಗೊಳಿಸು; ಅಂದರೆ ಕ್ರಮೇಣ ಈ ದೇಹವು ನಿನ್ನ ಕಠೋರ ಎಳತವನ್ನು ತಡಕೊಳ್ಳಲಿಕ್ಕೂ ಶಕ್ತವಾಗುವದು.

ಕಮಲೆ:—ಪ್ರಿಯಕರಿಣಿಯ ಪ್ರೇಮದಲ್ಲಿ ಅಭ್ಯಾಸ-ಅನಭ್ಯಾಸಗಳ ಪ್ರಶ್ನೆಯೆ?

ಬಂಡೇರಾಯ:—ಪ್ರಿಯೆ, ಪ್ರತಿಯೊಂದರಲ್ಲಿ ಕ್ರಮವಿಕಾಸವು ಲಾಭ ದಾಯಕವಾದದ್ದು. ಒಮ್ಮೆಲೆ ಚರಮಪದವನ್ನು ಹಿಡಿಯ ಹೋಗುವುದು ಇಷ್ಟವಲ್ಲ! ನೀನೂ ಓಡಿ ಹೋಗುವದಿಲ್ಲ, ನಾನೂ ಓಡಿ ಹೋಗುವದಿಲ್ಲ. ಇಬ್ಬರೂ ಇಲ್ಲಿಯೇ ಇರತಕ್ಕವರು. ಹೀಗಿರಲು, ಪ್ರೇಮಸಾಧನೆಗೆ ಅವ ಸರವೇಕೆ? ನಿನ್ನ ಪ್ರಣಯಾಭಿನಯವು ಕ್ರಮೇಣ ಉನ್ನತಿ ಹೊಂದುತ್ತ ನಡೆಯಲಿ. ನಾನದನ್ನು ಸಹಿಸಿಕೊಳ್ಳುತ್ತ ನಿನ್ನನ್ನನುಸರಿಸುವೆನು. ಇರಲಿ. ಅತ್ತಿಗೆಯೆಲ್ಲಿ?

ಕಮಲೆ:—ಈಗ ಅವಳ ನೆನಪೇಕೆ ಆಯಿತು? ನನ್ನಿಂದ ಕೆಲಸ ಸಾಗು ವಂತಿಲ್ಲವೇನು? ನಾನು ಹೆರವಳೇ? ಕೈ ಹಿಡಿದ ಸತಿಯು ಹತ್ತರಿದ್ದು ಸೇವೆಗೆ ಸಿದ್ಧಳಾಗಿರುವಾಗ, ಅತ್ತಿಗೆಯನ್ನು ಸ್ಮರಿಸಬೇಕೆ?

ಬಂಡೇರಾಯ:—ಅವಳು ಮೊನ್ನೆ ಮೊನ್ನೆ ವಿಧವೆಯಾಗಿ ದುಃಖಿತ ಳಾಗಿದ್ದಾಳೆ. ನಾವು ಅವಳನ್ನು ಸಮಾಧಾನಗೊಳಿಸಲಿಕ್ಕೆ ಬೇಕು.

ಕಮಲೆ:—ನನ್ನನ್ನು ಸಮಾಧಾನ ಪಡಿಸುವುದು ನಿಮ್ಮ ಕರ್ತವ್ಯವಲ್ಲ ವೇನು? ಅವಳ ವಿಷಯದಲ್ಲಿ ನಿಮಗೆ ಹೇಗೆ ಕನಿಕರವುಂಟಾಗುವದೊ, ಹಾಗೆ ನನ್ನ ವಿಷಯದಲ್ಲಿ ನಿಮಗೆ ದಯೆಯುಂಟಾಗಲೊಲ್ಲದಲ್ಲ!

(ಸಣ್ಣ ಮೋರೆ ಮಾಡುವಳು.)

ಬಂಡೇರಾಯ:—ಪ್ರಿಯೆ, ನಿನಗೆ ಅಸಮಾಧಾನವೇತರದು? ಬಹು ದಿನಗಳ ವಿರಹದ ತರುವಾಯದಲ್ಲಿ ನಿನ್ನ ಕೈಯಿಂದ ಜಾರಿ ಹೋಗಿದ್ದ ಪತಿ ಯನ್ನು ನೀನು ಅನಾಯಾಸವಾಗಿ ಹೊಂದಿರುವೆ. ಮತ್ತೊಂದು ಮುಖ್ಯ ಮಾತೆಂದರೆ ಅವಳ ಪತಿಯು ಮೃತನಾಗದಿದ್ದರೆ, ನೀನು ನಿನ್ನ ಪತಿಯ ಸಮಾ ಗಮವನ್ನು ಮತ್ತೆ ಹೊಂದುವ ಸಂಭವವಿದ್ದಿಲ್ಲ.

ಕಮಲೆ:—ಪ್ರಾಣನಾಥ........

ಬಂಡೇರಾಯ:—ಇನ್ನೊಂದು ಮಹತ್ವದ ಸಂಗತಿ ಯಾವುದೆಂದರೆ, ಅವಳ ಗಂಡನು ಸತ್ತ ಹೊರತು ನಿನ್ನ ಪ್ರಾಣನಾಥನು ಲಕ್ಷ ರೂಪಾಯಿಗಳನ್ನು ದೊರಕಿಸುವಂತಿದ್ದಿಲ್ಲ.

ಕಮಲೆ:—ಪ್ರಾಣದೊಡೆಯ, ಕ್ಷುದ್ರವಾದ ಆ ರೂಪಾಯಿಗಳ ಮಾತೆತ್ತಿ ನನ್ನ ಸ್ವರ್ಗೀಯ ಪ್ರೇಮದ ಅಪಮಾನ ಮಾಡಬೇಡಿರಿ! ನಾನು ರೂಪಾಯಿಗಳ ಆಶೆಯಿಂದ ನಿಮ್ಮ ಬೆನ್ನು ಹತ್ತಿರುವೆನೆಂದು ತಿಳಿದಿರುವಿರಾ? ಆ ಸುಡುಗಾಡ ರೂಪಾಯಿಗಳಾರಿಗೆ ಬೇಕಾಗಿವೆ? ಹಾಳಾಗಿ ಹೋಗಲಿ!

ಬಂಡೇರಾಯ:—ಸಖಿ, ನೀನು ತಪ್ಪುತ್ತಿರುವೆ! ರೂಪಾಯಿಗಳಿಂದ ಪ್ರೇಮದ ಅವಮಾನವೆಂದಾದರೂ ಆದೀತೆ? ಸಾಧ್ಯವಿಲ್ಲ! ಮೇಲಾಗಿ ರೂಪಾಯಿಗಳಿಂದ ಪ್ರೇಮದ ಗೌರವವು ಹೆಚ್ಚುತ್ತಿದೆ! ರೂಪಾಯಿಗಳ ಝಣತ್ಕಾರದಲ್ಲಿ ಪ್ರೇಮವು ಮಲಿನರಹಿತವಾಗಿ ಝಗಝಗಿಸಹತ್ತುತ್ತಿದೆ. ರೂಪಾಯಿಗಳ ಬೆಂಬಲವಿಲ್ಲದ ಪ್ರೇಮವು ನಿರರ್ಥಕವಾದದ್ದು ಅಜೀರ್ಣ ರೋಗಗ್ರಸ್ತನಾಗಿ ಹೊಟ್ಟೆಯನ್ನುಬ್ಬಿಸಿಕೊಂಡಿದ್ದ ಬಾಲಕನ ಮುಂದೆ ಪಕ್ವಾನ್ನಗಳ ರಾಶಿಯನ್ನು ಹರವಿದಂತೆ ನಿರುಪಯುಕ್ತವು!

ಕಮಲೆ:—ನಾಥ, ಈ ಹುಡುಗಾಟಿಕೆಯ ಮಾತುಗಳು ಸಾಕು! ಈ ಮಾತುಗಳಿಂದೇನೂ ಪ್ರಯೋಜನವಿಲ್ಲ. ಬಹು ದಿನಗಳಿಂದ ನಾನು ಯಾರ ಮಾರ್ಗಪ್ರತೀಕ್ಷೆ ಮಾಡುತ್ತಿದ್ದೆನೊ, ಅವರು ಇಂದು ನನಗೆ ದೊರೆದಿದ್ದಾರೆ. ಯಾರ ದರ್ಶನ ಮಾತ್ರದಿಂದ ನನ್ನ ಹೃದಯ ವ್ಯಥೆಯು ಪರಿಹಾರವಾಗತಕ್ಕದ್ದಿತ್ತೊ, ಅವರು ಇಂದು ತಾವೇ ತಾವಾಗಿ ನನ್ನ ಹತ್ತಿರ ಬಂದಿದ್ದಾರೆ. ನಾನು ಈ ಸುಸಂಧಿಯನ್ನು ವ್ಯರ್ಥ ಹೋಗಗೊಡುವವಳಲ್ಲ! ನನ್ನ ಕೋಣೆಗೆ ನಡೆಯಿರಿ. ಅಲ್ಲಿ ಸರಸ-ಸಲ್ಲಾಪಗಳನ್ನಾಡುತ್ತ ಆನಂದದಿಂದ ಹೊತ್ತುಗಳೆಯೋಣ. (ಜಗ್ಗುವಳು)

ಬಂಡೇರಾಯ:—ದಯವಿಟ್ಟು ಹೀಗೆ ಜಗ್ಗಬೇಡ. ಬಿದ್ದುಹೋದೇನು! ಮುಂಬಯಿಯ ಕೆಟ್ಟ ಹವೆಯಲ್ಲಿ ಬಹು ದಿನ ವಾಸವಾಗಿದ್ದುದರಿಂದ, ಪ್ರಕೃತಿಯು ತೀರ ಅಶಕ್ತವಾಗಿದೆ. ಮೃತ್ಯುಪತ್ರದ ಲಕ್ಷ ರೂಪಾಯಿಗಳ ಆಶೆಯಿಂದ ಜೀವವನ್ನು ಹಿಡಿದಿಟ್ಟುಕೊಂಡಿದೆ. ನೀನು ನನ್ನ ಮೇಲೆ ಹೀಗೆ

ಅತ್ಯಾಚಾರ ಮಾಡಹತ್ತಿದೆಯೆಂದರೆ, ನನ್ನೀ ಅಶಕ್ತ ದೇಹವು ಧಡಪಡಿಸುತ್ತಿದ್ದ ಜೀವವನ್ನು ಕ್ಷಣಾರ್ಧದಲ್ಲಿ ಹಾರಿಸಿ ಬಿಡುವದು!

ಕಮಲೆ:—ಪ್ರಾಣಪತಿ, ಹೀಗೆ ಅಭದ್ರ ಮಾತುಗಳನ್ನುಚ್ಚರಿಸಬೇಡಿರಿ! ನಾನು ನಿಮ್ಮ ಅರ್ಧಾಂಗಿನಿಯು. ನಿಮಗೆ ಅಪಾಯವಾಗುವಂತೆ ನಾನೆಂದೂ ಆಚರಿಸೆನು! ಈ ಕೋಮಲ ಬಾಹುಮಾಲೆಯನ್ನು ನಿಮ್ಮ ಕೊರಳಲ್ಲಿರಿಸಿ, ನನ್ನ ತೃಷಿತ ನೇತ್ರಗಳಿಂದ ನಿಮ್ಮ ಮುಖಕಮಲವನ್ನು ಸದಾ ನೋಡುತ್ತಿರಬೇಕೆಂದು ಆಶಿಸಿದವಳು ನಾನು.

(ಹೀಗೆ ಅಭಿನಯಿಸುವಳು.)

ಬಂಡೇರಾಯ:—ಅಯ್ಯೋ! ಇದೆಂತಹ ಆಲಿಂಗನವಪ್ಪಾ!

(ತಾರೆಯು ಬರುವಳು.)

ತಾರೆ:—ಪ್ರಿಯ ಮೈದುನನೆ................

ಬಂಡೇರಾಯ:—ಅತ್ತಿಗೆ, ಓಡಿ ಬಾ. ನನ್ನನ್ನು ಪಾರು ಮಾಡು. ಪ್ರಿಯೆಯ ಈ ಪ್ರೇಮಾಲಿಂಗನದಲ್ಲಿ ನನಗೆ ಪರಲೋಕವು ಸಮೀಪಿಸಿರುವದರಲ್ಲಿದೆ................!

ತಾರೆ:—ತಂಗೀ, ಬಿಡು ಸದಾ ಹೀಗೆ ಅವರ ಬೆನ್ನ ಹತ್ತಬೇಡ. ಆಲಿಂಗನ-ಚುಂಬನಗಳಿಂದ ಹೊಟ್ಟೆ ತುಂಬೀತೆ? ನೆತ್ತಿ ತುಂಬೀತೆ? ಹೋಗು, ತಾಂಬೂಲದ ಡಬ್ಬಿಯನ್ನು ತಕ್ಕೊಂಡು ಬಾ. ಸೊಗಸಾದ ವೀಳ್ಯಗಳನ್ನು ಮಾಡಿಕೊಡು.

ಕಮಲೆ:—ಅಕ್ಕಾ, ಆಗಲಿ. (ನಿಟ್ಟುಸಿರ ಬಿಡುವಳು.)ನೀನು ಹೇಳಿದಂತೆ ವೀಳ್ಯಗಳನ್ನು ಮಾಡಿ ತರುವೆನು. (ಹೋಗುವಳು.)

ತಾರೆ:—ವಿರಹಿಣಿಯೂ, ಉನ್ಮಾದಿನಿಯೂ ಆದ ಇವಳ ಪ್ರೇಮಸಮುದ್ರದ ಸಾಮಾನ್ಯತರಂಗವಿದು! ಇಷ್ಟರಿಂದಲೇ ನೀವು ಹೀಗೆ ಹೈರಾಣಾದರೆ, ಮುಂದಿನ ಗತಿಯೇನು?

ಬಂಡೇರಾಯ:-ಅದ್ಭುತ ತೆರೆಗಳ ಹೊಡತವು ಇನ್ನೂ ಶಿಲಕು ಇರುವದೇನು? ಪ್ರಿಯೆ, ನಾನು ಆ ದೊಡ್ಡ ತೆರೆಗಳ ಬಡಿತವನ್ನು ಸಹಿಸಲಾರೆ! ನನ್ನನ್ನು ಆ ಸಂಕಟದಿಂದ ಪಾರು ಮಾಡು! (ತಾರೆಯ ಕೈ ಹಿಡಿಯುವನು)

ತಾರೆ:—ತುಸ ತಡೆಯಿರಿ.

ಬಂಡೇರಾಯ:—ತಡೆಯುವಂತಿಲ್ಲ! ಲಕ್ಷ ರೂಪಾಯಿಗಳ ಆಶೆಯಿಂದ ಆಗ ಈ ಬಂಡೇರಾಯನಿಗೆ ಒದಗಿದ್ದುದು ಮೋಜಿನ ಮರಣವಾದರೂ, ಈಗ ಗುಂಡೇರಾಯನ ವೇಷದಲ್ಲಿದ್ದ ಬಂಡೇರಾಯನಿಗೆ ಪ್ರೇಮಾಭಿನಯದಲ್ಲಿ ಒದಗ ತಕ್ಕುದು ನಿಜ ಮರಣವೆಂಬದನ್ನು ಮರೆಯದಿರು! ಪ್ರಿಯೆ, ನೀನು ನನ್ನ ಅಂತವನ್ನು ನೋಡಬಯಸಿರುವೆಯಾ? ನೀನು ಹೆಂಗಸಲ್ಲವೆ? ನನ್ನ ಅರ್ಧಾಂಗಿನಿಯಲ್ಲವೆ? ಸಾಧ್ವಿಯೆ, ನೀನು ಎದುರಿನಲ್ಲಿರುವಾಗ ಆ ಕ್ಷುಲ್ಲಕ ಹೆಂಗಸು ನನ್ನೊಡನೆ ಪ್ರೇಮಾಭಿನಯವನ್ನು ನಟಿಸುವುದು ನಿನಗೆ ಸಹನೀಯವೆ? ಯೋಚಿಸಿ ನೋಡು. ಪರಿಣಾಮವೇನಾದೀತೆಂಬದನ್ನು ಮನಸ್ಸಿನಲ್ಲಿ ತಂದುಕೋ.

ತಾರೆ:—ನಾಥನೆ, ನಾನು ಸತಿಯು. ಕೇವಲ ಲಕ್ಷರೂಪಾಯಿಗಳೇಕೆ, ಕೋಟ್ಯಂತರ ರೂಪಾಯಿಗಳು ಸಿಗುವಂತಿದ್ದರೂ ಕಣ್ಣೆದುರಿನಲ್ಲಿ ನಡೆದ ಈ ನಾಟಕವನ್ನು ನೋಡಲಾರೆನು!

ಬಂಡೇರಾಯ:—ಹೀಗಿದ್ದರೆ ಬೇಗನೆ ಉಪಾಯವನ್ನು ಯೋಚಿಸು. ಈಗ ನಾನು ನನ್ನ ನಿಜ ರೂಪವನ್ನು ಪ್ರಕಟಿಸುವಂತಿಲ್ಲ, ಅವಳನ್ನು ಹೊರಗೆ ಹಾಕುವಂತಿಲ್ಲ; ಯಾಕಂದರೆ ಲಕ್ಷ ರೂಪಾಯಿಗಳ ಪ್ರಾಪ್ತಿಗಾಗಿ ನಾವು ಈ ಆಟವನ್ನು ಹೂಡಿದ್ದೇವೆ. ನಮ್ಮ ಆಲೋಚನೆಯು ಸಿದ್ಧಿಸುವುದರಲ್ಲಿದೆ. ಇಂತಹ ಸಮಯದಲ್ಲಿ ನಮ್ಮ ನಿರ್ದಿಷ್ಟ ಕಾರ್ಯಕ್ಕೆ ವ್ಯಾಘಾತವನ್ನು ತಂದುಕೊಳ್ಳಕೂಡದು. ನಮ್ಮ ಕೆಲಸವು ಸಾಧಿಸಿರಬೇಕು; ಅವಳ ಪೀಡೆಯು ತಪ್ಪಿರಬೇಕು; ಇಂಥದೊಂದು ಹಂಚಿಕೆಯನ್ನು ಹುಡುಕು.

ತಾರೆ:—ರಾತ್ರಿಯು ಹೆಚ್ಚುತ್ತ ನಡೆದಿದೆ. ಇನ್ನು ಅವಳಿಂದ ನಿಮ್ಮನ್ನು ಅಗಲಿಸುವುದು ಹೇಗೆ? ನಿಮ್ಮಿರ್ವರ ವ್ಯವಹಾರವನ್ನು ನೋಡಿ ಸಹಿಸುವುದು ನನ್ನಿಂದಾಗದು............

ಬಂಡೇರಾಯ:—ನಿನ್ನ ಬುದ್ಧಿದೋಷದಿಂದ ನನಗೀ ಅವಸ್ಥೆಯುಂಟಾಯಿತು. ನೀನು ಮೊದಲು ನನಗೆ ಸೂಚನೆ ಕೊಟ್ಟಿದ್ದರೆ, ನಾನು ಸಂನ್ಯಾಸಿಯ ವೇಷದಲ್ಲಿ ಬಂದು ಬಿಡುತ್ತಿದ್ದೆನು. ಹೀಗಾಗಿದ್ದರೆ ಕಮಲೆಯು ಎಷ್ಟೇ

ಪೀಡಿಸಿದರೂ ಸಂನ್ಯಾಸವನ್ನು ಗೃಹಿಸಿದ ನಾನು, ನಿನ್ನನ್ನು ಮುಟ್ಟಲಾರೆನೆಂದು ಹೇಳಲಿಕ್ಕೆ ಬರುತ್ತಿತ್ತು.

ತಾರೆ:—ಹೀಗೆ ಸೂಚಿಸಲಿಕ್ಕೆ ನನಗೆ ಅವಕಾಶವಿರಲಿಲ್ಲ.

ಬಂಡೇರಾಯ:—ಈಗ ನನಗೆ ಏನು ಮಾಡೆಂದು ಹೇಳುವೆ? ನೀನು ಹೇಳಿದಂತೆ ಕೇಳಲಿಕ್ಕೆ ನಾನು ಸಿದ್ಧನಿದ್ದೇನೆ!

ತಾರೆ:—ನನಗೆ ಏನೂ ಹೊಳೆಯಲೊಲ್ಲದು! ನಾನು ಹೆಂಗಸು. ನನ್ನ ಬುದ್ಧಿ ಕುಂಠಿತವಾಗಿ ಹೋಗಿದೆ! ಹೀಗಾದೀತೆಂದು ಮೊದಲೇ ನನಗೆ ಅನಿಸಿದ್ದರೆ, ನಾನು ಈ ನಾಟಕವನ್ನೇ ಹೂಡಗೊಡುತ್ತಿದ್ದಿಲ್ಲ. ಪ್ರಿಯ, ನಾನು ನಿಮ್ಮನ್ನು ಅನ್ಯಳ ಸ್ವಾಧೀನ ಪಡಿಸಲಾರೆನು! ನೀವು ಪರಸ್ತ್ರೀಯೊಡನೆ ಪ್ರೇಮಸಾಧನೆ ಮಾಡುವುದನ್ನು ಸಹಿಸಿಕೊಳ್ಳಲಾರೆನು! ಹೇಗಾದರೂ ಮಾಡಿ ನೀವು ನನ್ನ ದುರವಸ್ಥೆಯನ್ನು ದೂರಗೊಳಿಸಿರಿ (ಕಣ್ಣಲ್ಲಿ ನೀರು ತರುವಳು.)

ಬಂಡೇರಾಯ:—ಪ್ರಿಯೆ, ಅಳಬೇಡ. ನೀನು ಶೋಕಿಸುವುದನ್ನು ನಾನು ನೋಡಲಾರೆನು. ಮೊದಲು ಯೋಚಿಸಿದ್ದೊಂದು, ಈಗ ಒದಗಿರುವುದು ಮತ್ತೊಂದು! ಆಗಲಿ. ಏನಾದರೊಂದು ಯುಕ್ತಿಯನ್ನು ಹುಡುಕಿ ಪಾರಾಗೋಣ. (ತಾರೆಯು ಪತಿಯನ್ನಪ್ಪಿಕೊಳ್ಳುವಳು. ಕಮಲೆಯು ಎಲೆ-ಅಡಿಕೆಯ ಡಬ್ಬಿಯನ್ನು ತಕ್ಕೊಂಡು ಬರುವಳು. ಹತಾಶದೃಷ್ಟಿಯಿಂದ ನೋಡುವಳು. ಕೈಯಲ್ಲಿಯ ಡಬ್ಬಿಯು ಬಿದ್ದು ಹೋಗುವದು. ಆ ಸಪ್ಪಳದಿಂದ ಬಂಡೇರಾಯನೂ ತಾರೆಯೂ ಚಕಿತರಾಗಿ, ಸರಿದು ನಿಲ್ಲುವರು.)

ಕಮಲೆ:—ನಾಥ....ನಿರ್ದಯ....(ಕಮಲೆಯು ಮೂರ್ಛೆ ಹೊಂದುವಳು.)

ಬಂಡೇರಾಯ:—ಮೂರ್ಛೆ ಬಂದು ಬಿದ್ದಿರುವಳು. ನೀರು ತಕ್ಕೊಂಡು ಬಾ. (ತಾರೆಯು ಹೋಗುವಳು. ಕೆಂಚನು ಬಂದು ನೋಡುತ್ತ ನಿಲ್ಲುವನು. ಬಂಡೇರಾಯನು ಹೋಗೆಂದು ಸನ್ನೆ ಮಾಡುವನು. ಆದರೂ ಕೆಂಚನು ಹಾಗೆಯೇ ನಿಂತಿರುವನು. ಬಂಡೇರಾಯನು ಕೆಂಚನ ಕೆನ್ನೆಗೆ ಹೊಡೆಯುವನು.)

ಬಂಡೇರಾಯ:—ಎಲೋ ಮೂರ್ಖಾ! ಹೀಗೆ ಬಾಯಿ ತೆರಕೊಂಡು ನಿಂತೆ ಏಕೆ? ಒಳಗೆ ಹೋಗಿ ಬೇಗನೆ ನೀರು ತಕ್ಕೊಂಡು ಬರುವಂತೆ ಹೇಳು. (ಕೆಂಚನು ಸಣ್ಣ ಮೋರೆ ಮಾಡಿಕೊಂಡು ಹೋಗುವನು ಬಂಡೇರಾಯನು ಕಮಲೆಯ

ಮುಖದ ಕಡೆಗೆ ನೋಡುತ್ತ ನಿಲ್ಲುವನು. ಕಮಲೆಯು ಎಚ್ಚತ್ತು ಮೆಲ್ಲನೆ ಕಣ್ಣು ತೆರೆಯ ಹತ್ತಿದಳು. ಕೆಲಹೊತ್ತಿನ ಮೇಲೆ)

ಕಮಲೆ:— ನಾಥ...............

ಬಂಡೇರಾಯ:—ಪ್ರಿಯೆ, ಎಚ್ಚತ್ತೆಯಾ? ಏಳು. (ಕಮಲೆಯು ಏಳುವಳು. ಬಂಡೇರಾಯನ ಹೆಗಲ ಮೇಲೆ ಕೈಯಿರಿಸಿ ನಿಂತಳು. ಬಳಿಕ ಅವನ ಎದೆಯ ಮೇಲೆ ಮೋರೆಯನ್ನಿಟ್ಟು)

ಕಮಲೆ:—ಪ್ರಿಯತಮ,........(ಬಂಡೇರಾಯನು ಗಾಬರಿಯಾಗಿ ಅತ್ತಿತ್ತ ನೋಡುವನು. ತಾರೆಯು ನೀರು ತುಂಬಿದ ತಾಲಿಯನ್ನು ತಕ್ಕೊಂಡು ಬರುವಳು. ಆ ದೃಶ್ಯವನ್ನು ನೋಡಿ ಅವಳ ಕೈಯಿಂದ ತಾಲಿಯು ಬೀಳುವದು. ಅವಳೂ ಮೂರ್ಛಿತಳಾಗುವಳು.)

ಬಂಡೇರಾಯ:—ಅಯ್ಯೋ, ಇವಳು ಮೂರ್ಛಿತಳಾದಳು. ಪ್ರಿಯೆ, ನೀನು ನೀರ ತಗೊಂಡು ಬಾ. (ತಾರೆಯನ್ನು ಎಬ್ಬಿಸ ಹೋಗುವನು. ಕಮಲೆಯು ಪ್ರತಿಬಂಧ ಮಾಡುವಳು, ಆದರೂ ಬಂಡೇರಾಯನು ತಾರೆಯನ್ನು ಎಬ್ಬಿಸಿದನು, ತಾರೆಯು ಎಚ್ಚತ್ತು ಬಂಡೇರಾಯನನ್ನು ಅಪ್ಪಿಕೊಳ್ಳಬಂದಳು. ಕಮಲೆಯು ಬಂಡೇರಾಯನನ್ನು ಹಿಡಿದೆಳೆದಳು.)

ಕಮಲೆ:—ಅಕ್ಕಾ, ಇವರು ನನ್ನ ಪ್ರಾಣಪತಿಗಳು. ನೀನು ಇವರ ಹತ್ತಿರ ಬರಬೇಡ!

ತಾರೆ:—ಇವನು ನನ್ನ ಮೈದುನನಲ್ಲವೆ? ಬರಲಿಕ್ಕೆ ಅಡ್ಡಿ ಏನು?

ಕಮಲೆ:—ಅಡ್ಡಿಯೇನೆಂದು ಕೇಳುವಿಯಾ? ಬಹು ದಿನಗಳ ವಿರಹದ ತರುವಾಯದಲ್ಲಿ ನಾನು ನನ್ನ ಈ ಪತಿಯನ್ನು ಮತ್ತೆ ಪಡೆದಿದ್ದೇನೆ. ಇನ್ನು ನಾನು ನನ್ನ ಈ ಪ್ರಿಯತಮನ ಹತ್ತಿರ ಅನ್ಯರನ್ನು ಬರಗೊಡತಕ್ಕವಳಲ್ಲ! ತಿಳಿಯಿತೆ?

ತಾರೆ:—ನಾನೂ ನಿನ್ನಂತೆಯೇ ಬಹು ದಿನಗಳ ತರುವಾಯ ನನ್ನ ಈ ಮೈದುನನನ್ನು ಹೊಂದಿದ್ದೇನೆ. ನಾನು ಇವನನ್ನು ಮಾತಾಡಿಸಲಾಗದೆ? ಇವನ ಹತ್ತಿರ ಹೋಗಲಾಗದೆ?

ಕಮಲೆ:—ಆಗದು! ನೀನು ಇವರ ನೆರಳ ಸಮೀಪಕ್ಕೆ ಸಹ ಹಾಯ

ಕೂಡದು! ನಡೆಯುತ್ತ! (ಇಬ್ಬರೂ ಬಡಿದಾಡಹತ್ತುವರು)

ಬಂಡೇರಾಯ:—ಆಗಲಿ, ಕಲಹಿಸಿರಿ. ಮನದಣಿಯುವಂತೆ ಜಗಳಾಡಿರಿ. ನಾನು ನಿಮ್ಮಿಬ್ಬರನ್ನೂ ಮಾತಾಡಿಸುವದಿಲ್ಲ. ಹೋಗಿ ಬಿಡುವೆನು. (ಹೋಗುವನು ತಾರೆಯೂ, ಕಮಲೆಯೂ ಜಗಳವನ್ನು ಬಿಟ್ಟು ಆ ಕಡೆಗೆ ನೋಡುತ್ತ ನಿಲ್ಲುವರು )

---

## ೬ನೆಯ ಪ್ರವೇಶ.

(ತಾರೆಯು ಕೈಯಲ್ಲಿ ಪತ್ರವನ್ನು ಹಿಡಕೊಂಡು ಬರುವಳು)

ತಾರೆ:— ಈ ಪತ್ರವನ್ನು ಯಾರು ಬರೆದಿರುವರಾದೀತು? ಇಂಗ್ಲಿಷದಿಂದ ಮೇಲ್ವಿಳಾಸವನ್ನು ಬರೆದಿದ್ದಾರೆ. ಒಡೆದು ನೋಡುವೆನು....(ಗುಂಡೇರಾಯನ ವೇಷದಲ್ಲಿ ಬಂಡೇರಾಯನು ಬರುವನು )

ಬಂಡೇರಾಯ:—ನಾನು ರಾತ್ರಿಯನ್ನು ಹೇಗೆ ಕಳೆಯಲಿ? ಬೀದಿಯಲ್ಲಿ ಅಲೆಯುತ್ತ ಬೆಳಗುಗಳೆಯಲೇನು?

ತಾರೆ:—ಅದೇಕೆ? ನೀವು ಕಮಲೆಯ ಮುಂದೆ ಸಿನೇಮಾ ನೋಡಲಿಕ್ಕೆ ಹೋಗುವೆನೆಂದು ಹೇಳಿ ಹೊರಟಿರುವಿರಷ್ಟೇ? ಕೊಂಚ ಹೊರಗೆ ಅಡ್ಡಾಡಿ ಬರ್ರಿ. ನಾನು ಇನ್ನು ಮೇಲೆ ಕಮಲೆಯ ಹತ್ತಿರ ಹೋಗಿ ಹರಟೆಯ ಹಚ್ಚುವೆನು. ಆ ಸಮಯದಲ್ಲಿ ನೀವು ಕೆಳಗಿನ ಮನೆಯಲ್ಲಿ ಬಂದು ಅಡಗಿಕೊಂಡಿರ್ರಿ. ನಾನು ಕಮಲೆಗೆ ನಿದ್ದೆ ಹತ್ತಿದ ಬಳಿಕ ನಿಮ್ಮ ಬಳಿಗೆ ಬರುವೆನು.

ಬಂಡೇರಾಯ:—ಹೀಗೆ ಎಷ್ಟು ದಿವಸ ನಡೆಯಬೇಕು?

ತಾರೆ:—ಲಕ್ಷ ರೂಪಾಯಿಗಳು ನಮ್ಮ ಕೈ ಸೇರುವ ವರೆಗೆ.

ಬಂಡೇರಾಯ:—ಆಗಲಿ. ನಿನ್ನ ಇಷ್ಟದಂತೆ ವರ್ತಿಸುವೆನು. ಕೈಯಲ್ಲಿ ಪತ್ರವನ್ನು ಹಿಡಿದಿರುವಂತೆ ಕಾಣುತ್ತದೆ. ಅದಾರ ಪತ್ರ?

ತಾರೆ:—ಇನ್ನೂ ಓದಿಕೊಂಡಿಲ್ಲ. ನಿಲ್ಲಿರಿ, ಓದಿ ನೋಡುವೆನು.

(ಓದಿಕೊಳ್ಳುವಳು. ಮೋರೆಯು ಬಾಡುವದು.)

ಬಂಡೇರಾಯ:-ಒಮ್ಮೆಲೆ ಹೀಗೇಕೆ ಗಾಬರಿಯಾದೆ? ಪತ್ರದಲ್ಲಿ ಏನಿದೆ?

ತಾರೆ:—ಓದಿಕೊಳ್ಳಿರಿ! (ಪತ್ರವನ್ನು ಕೊಡಹೋಗುವಳು.)

ಬಂಡೇರಾಯ:—ನಾನು ಓದಲಾರೆನು ನೀನೇ ಓದಿ ಹೇಳಿಬಿಡು.

ತಾರೆ:—ಓದುವೆನು. ಲಕ್ಷ್ಯವಿರಿಸಿ ಕೇಳಿರಿ: (ಪತ್ರವನ್ನು ಓದಹತ್ತಿದಳು.)

"ಪ್ರಿಯ ಅತ್ತಿಗೆ,

ಅಣ್ಣನ ಶೋಚನೀಯ ಮರಣವನ್ನು ಕೇಳಿ, ಅತಿಶಯ ದುಃಖವಾಯಿತು. ಈಶ್ವರೀ ಸಂಕಲ್ಪಕ್ಕೆ ಉಪಾಯವಿಲ್ಲ! ನಿನ್ನ ದುಃಖಕ್ಕೆ ಮೇರೆಯಿಲ್ಲ! ನಾನು ನಿನ್ನ ಸಮಾಧಾನಕ್ಕೆ ಅಲ್ಲಿಗೆ ಬರಬೇಕೆಂದು ಹೊರಟಿರುವೆನು. ಬೇಗನೆ ಬರುವೆನು.

ನಿನ್ನ ಸ್ನೇಹದ ಮೈದುನ, ಗುಂಡೇರಾಯ ಬಾಯ್ಸ್ಗಳಿ."

ಬಂಡೇರಾಯ:—ಇದೊಂದು ಹೊಸ ಪಿಡುಗು!

ತಾರೆ:—ಇದಕ್ಕೆ ಉಪಾಯವೇನು?

ಬಂಡೇರಾಯ:—ಇನ್ನು ಈ ವೇಷಧಾರಿಯಾದ ಬಂಡೇರಾಯನು ಸಿನೇಮಾದಿಂದ ಮನೆಗೆ ಬರುವಂತಿಲ್ಲ. ಪ್ರಿಯೆ, ಕೆಲಸವು ಕೆಟ್ಟು ಹೋಯಿತು. ನಾವು ಮಾಡಿದ ಆಲೋಚನೆಗಳೆಲ್ಲವೂ ನಿರರ್ಥಕವಾದುವು! ಇನ್ನು ಈ ವೇಷಾಂತರದಿಂದ ಉಪಯೋಗವಿಲ್ಲ.

(ವೇಷಾಂತರದ ಸಾಮಾನುಗಳನ್ನು ಕಿತ್ತಿ ಬಿಸುಟುವನು. ತಾರೆಯು ಅವುಗಳನ್ನು ಮತ್ತೆ ಕಲೆಹಾಕಿ ತರುವಳು.)

ತಾರೆ:—ಹೀಗೆ ಉತಾವಳಿತನವನ್ನು ತಳೆಯಬೇಡಿರಿ; ಮತ್ತೆ ಇವುಗಳನ್ನು ಧರಿಸಿರಿ. ಮುಂದೆ ಪ್ರಸಂಗ ಬಂದಂತೆ ವರ್ತಿಸಿದರಾಯಿತು.

(ಬಂಡೇರಾಯನು ಮತ್ತೆ ಆ ವೇಷವನ್ನು ಧರಿಸುವನು.)

ಬಂಡೇರಾಯ:—ಪ್ರಿಯೆ, ಇನ್ನು ನನ್ನ ಗತಿಯೇನು? ಏನ ಮಾಡಲಿ? ಎಲ್ಲಿಗೆ ಹೋಗಲಿ?

ತಾರೆ:—ನೀವು ಇಷ್ಟೊಂದು ಗಾಬರಿಯಾಗುವ ಕಾರಣವಿಲ್ಲ. ಈಗಿರುವಂತೆಯೇ ಇದ್ದು ಬಿಡಿರಿ. ಯಾವನು ಬರುವನೋ ಬರಲಿ. ಅವನು ಮೋಸಗಾರನೆಂದೂ, ನೀವು ನಿಜ ಮನುಷ್ಯರೆಂದೂ ನಾನು ಹೇಳುವೆನು.

ಬಂಡೇರಾಯ:—ನೀನೊಬ್ಬಳು ಹೇಳಿದರೇನಾಗುವದು? ನಿನ್ನ ಮಾತನ್ನು ನಂಬುವವರಾರು? ಕಮಲೆಯೊಬ್ಬಳಿರುವಳಲ್ಲ!........

ತಾರೆ:—ಹೌದು....(ಆಲೋಚಿಸಿ) ಅವಳು ಎಂಥವಳೆಂಬದನ್ನು ನಾನು ಗೊತ್ತು ಮಾಡಿಕೊಂಡಿದ್ದೇನೆ. ಈಗ ನಾವು ಅವಳನ್ನು ನಮ್ಮ ದಲದಲ್ಲಿ ಸೇರಿಸಿಕೊಳ್ಳಬೇಕು ಇದಕ್ಕಾಗಿ ನೀವು ಅವಳೊಡನೆ ಹೆಚ್ಚು ಸಲುಗೆ ಯಿಂದ ವರ್ತಿಸಬೇಕು! ಇದರಿಂದ ನನಗೆ ವಿಶೇಷ ವ್ಯಥೆಯಾಗುವುದು; ಆದರೂ ಚಿಂತೆ ಯಿಲ್ಲ! ನಾನಿದನ್ನು ಹೇಗಾದರೂ ಮಾಡಿ ಸಹಿಸಿಕೊಳ್ಳುವೆನು. ಎಷ್ಟೋ ಹೆಂಗಳೆಯರು ಸವತಿಯರಿಂದೊಡಗೂಡಿ ಬಾಳ್ವೆ ಮಾಡುವುದಿಲ್ಲವೆ? ನಾನೂ ಕೆಲ ದಿನಗಳ ಮಟ್ಟಿಗೆ ಹಾಗೆ ಭಾವಿಸಿಕೊಳ್ಳುವೆನು.

ಬಂಡೇರಾಯ:—ನಿನಗೆ ಇದೆಲ್ಲವೂ ಹುಡುಗಾಟಿಕೆಯಾದಂತೆ ತೋರು ವದಲ್ಲವೆ? ಪೇಚು ಬಂದಿರುವುದು ನನಗೆ ! ಒದ್ದಾಡುವವನು ನಾನು! ಒಂದು ಕಡೆಯಲ್ಲಿ ಕಮಲೆಯ ಪಿಡುಗು! ಮತ್ತೊಂದು ಕಡೆಯಲ್ಲಿ ಮೋಸಗಾರಿಕೆಯ ಅಪರಾಧದ ಖಟ್ಲೆ, ಪೋಲೀಸರ ಉತ್ಪಾತ! ಇನ್ನು ನನ್ನ ಗತಿಯು ನೆಟ್ಟಗಿಲ್ಲ! ಇಷ್ಟೆಲ್ಲ ಅನರ್ಥಕ್ಕೆ ನೀನೇ ಕಾರಣಳು. ಪ್ರಿಯೆ, ಯೋಚಿಸಿ ನೋಡು. ನೀನು ಅವಸರಕ್ಕೊಳಗಾಗಿ ಈ ಅನರ್ಥವನ್ನು ತಂದೊಡ್ಡಲಿಲ್ಲವೆ? ಇನ್ನೆರಡು ದಿವಸ ತಡೆದು ನಾವು ಯೋಚನೆ ಮಾಡಿಕೊಂಡು ಕಾರ್ಯವನ್ನು ಆರಂಭಿ ಸಿದ್ದರೆ ಹೀಗೆ ವಿಪತ್ತಿಗೆ ಗುರಿಯಾಗುತ್ತಿದ್ದೆವೆ? ನನ್ನನ್ನು ತುಂಗಭದ್ರೆಯಲ್ಲಿ ಮುಳುಗಿಸಿ ಸಾಯ ಹೊಡೆದು ಶ್ರಾದ್ಧವನ್ನು ಮಾಡಿಬಿಟ್ಟೆರುವೆ? ಇನ್ನು ನನಗೆ ಜೀವಿಸಲಿಕ್ಕೆ ಮಾರ್ಗವೇ ಇಲ್ಲದಾಗಿದೆ! 'ಸ್ತ್ರೀ ಬುದ್ಧಿಃ ಪ್ರಲಯಂ ಕರೀ' ಅಲ್ಲದೆ ಮತ್ತೇನು?

ತಾರೆ:—ಪ್ರಿಯ, ಹೀಗೆನ್ನದಿರು. ಈಗಲಾದರೂ ಏನಾಗಿದೆ? ಯೋ-ಚನೆ ಮಾಡಿ ಯಾವುದೊಂದು ಯುಕ್ತಿಯನ್ನು ಹುಡುಕಿಕೊಂಡು ಸಾವಧಾನತೆಯಿಂದ ವರ್ತಿಸಿದರೆ, ನಾವು ಈ ವಿಪತ್ತಿನಿಂದ ಸಹಜವಾಗಿ ಪಾರಾಗ ಬಹುದು.

ಬಂಡೇರಾಯ:—ಆಗಲಿ. ಯುಕ್ತಿಯನ್ನು ಹುಡುಕಲಿಕ್ಕೆ ಈಗಲೂ ನಿನ್ನ ತಲೆಯು ಶಾಂತವಾಗಿದೆಯೆ? ನನ್ನ ತಲೆಯಂತೂ ಪೂರಾ ಕೆಟ್ಟು ಹೋಗಿದೆ! ಅಲ್ಲಿಂದ ಯಾವ ಹಂಚಿಕೆಯೂ ಹೊರಬೀಳುವಂತಿಲ್ಲ!

ತಾರೆ:—ನನಗೊಂದು ಹಂಚಿಕೆಯು ತೋರುತ್ತಿದೆ!

**ಬಂಡೇರಾಯ:**—ಅದಾವುದು, ಹೇಳು ನೋಡೋಣ?

**ತಾರೆ:**—ನೀವು ಸಾಯಬೇಕು!

**ಬಂಡೇರಾಯ:**—ಒಮ್ಮೆ ಸಾಯಹೊಡೆದು ಈ ಅನರ್ಥ ಪರಂಪರೆಗಳನ್ನೆಬ್ಬಿಸಿದುದು ನಿನಗೆ ಸಾಕಾಗಿಲ್ಲವೇನು? ನಿನ್ನ ಈ ಪತಿಯನ್ನು ಎಷ್ಟುಸಾರೆ ಕೊಲ್ಲಬೇಕೆಂದಿರುವೆ? ನಾನು ಎಷ್ಟು ಸಾರೆ ಸತ್ತರೆ ನಿನಗೆ ತೃಪ್ತಿಯಾಗುವದು?

**ತಾರೆ:**—ಪ್ರಿಯ, ಹೀಗೆ ಮಾತಾಡಿದರೆ ನಾನೇನ ಹೇಳಲಿ? ನಿಮಗೆ ನನ್ನ ಮೇಲೆ ನಂಬುಗೆಯಿಲ್ಲವೇನು? ಇಲ್ಲದಿದ್ದರೆ ನಾನಿನ್ನು ನಿಮ್ಮೊಡನೆ ಮಾತಾಡುವುದಿಲ್ಲ. (ಕೋಪವನ್ನು ನಟಿಸುವಳು.)

**ಬಂಡೇರಾಯ:**—ಪ್ರಿಯೆ, ಸಿಟ್ಟಾಗದಿರು. ನಡುನದಿಯಲ್ಲಿರುವ ನನ್ನ ಕೈಯ ಬಿಡದಿರು. ನಾನು ನಿನಗೆ ಶರಣು ಬಂದಿರುವೆನು.

**ತಾರೆ:**—ಹೀಗಿದ್ದರೆ ನಾನು ಹೇಳಿದಂತೆ ಕೇಳಿರಿ.

**ಬಂಡೇರಾಯ:**—ಆಗಲಿ, ಸಾಯುವೆನು. ಸತ್ತ ಬಳಿಕ ಮತ್ತೆ ಯಾವ ರೂಪದಿಂದ ಪ್ರಕಟನಾಗಲಿ?

**ತಾರೆ:**—ನಿಜರೂಪವನ್ನು ಧರಿಸಿರಿ.

**ಬಂಡೇರಾಯ:**—ಇನ್ನು ಬಂಡೇರಾಯನಂತೆ ವ್ಯವಹರಿಸಲಿಕ್ಕೆ ದಾರಿಯಿಲ್ಲದಾಗಿದೆ. ನೀನವನನ್ನು ಸಾಯಹೊಡೆದು ಶ್ರಾದ್ಧವನ್ನು ಸಹ ಮಾಡಿಬಿಟ್ಟಿರುವೆ! ಇನ್ನು ನಾನು ಸತ್ತಿಲ್ಲವೆಂದು ಹೇಳಿದರೆ ಕೇಳುವವರಾರು? ಮೇಲಾಗಿ ಸಾವಕಾರರು ನನ್ನ ಮೇಲೆ ವಿಶ್ವಾಸಘಾತುಕ ಫಿರ್ಯಾದೆಯು ಮಾಡಿದರೆ, ನಾನು ಪೋಲೀಸರ ಕಬುಳಬಲ್ಲ ಸಿಕ್ಕು, ಬಹಳ ಕಷ್ಟಕ್ಕೊಳಗಾಗಬೇಕಾಗುತ್ತಿದೆ!

**ತಾರೆ:**—ಈಗ ನೀವು ಹೊರಬೀಳಬೇಡಿರಿ. ಬಂಡೇರಾಯರಾಗಿ ಅಡಗಿರಿ. ಅನುಕೂಲ ಸಂಧಿಯಲ್ಲಿ ಪ್ರಕಟರಾಗಿರಿ ಆ ಅನುಕೂಲ ಸಮಯವನ್ನು ನಾನು ನಿಮಗೆ ಸೂಚಿಸುವೆನು. ಅಗೋ, ಅಲ್ಲಿ ಕಮಲೆಯು ಬರುತ್ತಾಳೆ. ನೀವಿನ್ನು ಅದೃಶ್ಯರಾಗಿರಿ. ನಾನು ಆಗಲೆ ಹೇಳಿದಂತೆ ಸಾವಧಾನತೆಯಿಂದ ಆಚರಿಸಿರಿ. (ಬಂಡೇರಾಯನು ಹೋಗುವನು. ನೇಪಥ್ಯದಲ್ಲಿ "ಅಯ್ಯೋ ಪ್ರಾಣದಯಿತನೆ, ನೀನೆಲ್ಲಿಗೆ ಹೋದೆ ನಾನು ನಿನ್ನನ್ನೆಷ್ಟು ಹುಡುಕಲಿ"

ಎಂಬ ಧ್ವನಿಯಾಗುತ್ತಿದೆ. ಬಳಿಕ ಕಮಲೆಯು ಬರುತ್ತಾಳೆ.)

ಕಮಲೆ:—ಅಕ್ಕಾ, ಸಿನೇಮಾ ಎಷ್ಟು ಗಂಟೆಗೆ ಮುಗಿಯುವದು?

ತಾರೆ:—ತಂಗಿ, ಇಂದು ಯಾವುದೋ ಒಂದು ಪರ್ವವಿದೆಯಂತೆ! ಬೆಳತನಕ ಸಿನೆಮಾ ನಡೆಯುತಕ್ಕದ್ದಿದೆಯಂತೆ

ಕಮಲೆ:—ಹೀಂಗೆ ನಿನಗೆ ಹೇಳಿದವರಾರು?

ತಾರೆ:—ಹೋಗುವ ಮುಂಚೆ ಪ್ರೈಧುನನು ಹೀಗೆ ಹೇಳಿ ಹೋದನು.

ಕಮಲೆ:—ಇಂದು ರಾತ್ರಿಯಲ್ಲಿ ಇನ್ನು ನನಗಿವರ ದರ್ಶನವಾಗುವದಿಲ್ಲವೆ? ಸ್ವಚ್ಛವಾದ ಆಕಾಶದಲ್ಲಿ ಚಂದ್ರಮನುದಯಿಸುವದಿಲ್ಲವೆ? ಕೋಗಿಲೆಯು ಸುಸ್ವರದಿಂದ ಹಾಡುವದಿಲ್ಲವೆ? ಅಕ್ಕಾ, ಮಂದಭಾಗ್ಯಳು ನಾನು! ಬಹು ದಿನಗಳ ಮೇಲೆ ಪತಿಯನ್ನು ಸಂದರ್ಶಿಸಿದ್ದರೂ, ಇವರ ಅನುರಾಗಕ್ಕೆ ಪಾತ್ರಳಾಗಲಿಲ್ಲ! ಎಂತಹ ನಿರ್ದಯರಿರುವರು ನೋಡು! ಹೋಗುವ ಮುಂದೆ ಒಮ್ಮೆ ಮಾತಾಡಿಸಿ ಸಹ ಹೋಗಲಿಲ್ಲ! ಈ ಅಸಹ್ಯವಾದ ದುಃಖವನ್ನು ನಾನೆಂತು ಸಹಿಸಲಿ? ಅಕ್ಕಾ, ನೀನೂ ಹೆಂಗಸಲ್ಲವೆ? ನಿನಗೆ ನನ್ನ ಈ ಮನೋವ್ಯಥೆಯು ತಿಳಿಯುವದಿಲ್ಲವೆ?

ತಾರೆ:—ತಂಗಿ, ನಾನು ಮಾಡಲೇನು? ನನ್ನ ಕೈಯಲ್ಲಿದೆಯೇನು? ನಾನೂ ನಿನ್ನಂತೆಯೇ ಅಬಲೆ. ಪುರುಷರು ಮನಬಂದಂತೆ ವರ್ತಿಸಲಿಕ್ಕೆ ಸ್ವತಂತ್ರರು. ಮತ್ತೊಂದು ಮಾತೆಂದರೆ, ಇವನು ಗುಂಡೇರಾಯನಲ್ಲ; ಮೋಸಗಾರನು. ನಮ್ಮೆಲ್ಲರನ್ನು ವಂಚಿಸಲಿಕ್ಕೆ ಸೋಗು ಹಾಕಿಕೊಂಡು ಬಂದವನು.

ಕಮಲೆ:—ಅಕ್ಕಾ, ಹೀಗೆನ್ನದಿರು! ನಾನು ಇವರನ್ನು ಚನ್ನಾಗಿ ಗುರತಿಸಿದ್ದೇನೆ. ಪಾಣಿಗ್ರಹಣ ಮಾಡಿದ ಹೆಂಡತಿಯು ತನ್ನ ಪತಿಯನ್ನು ಮರೆವ ಸಂಭವವಿದೆಯೆ? ಆದರೆ ನೀನು ವಿಧವೆಯಾಗಿರುವೆ. ನಾನು ಆಕಸ್ಮಾತ್ತಾಗಿ ಪತಿಯನ್ನು ಹೊಂದಿ ಸುಖಿಸುವುದನ್ನು ಸಹಿಸದಾಗಿರುವೆ. ಅಂತೆಯೇ ಹೀಗೆ ಮಾತಾಡುತ್ತಿರುವೆ.

ತಾರೆ:—ತಂಗಿ, ನಾನು ಮತ್ಸರಗ್ರಸ್ತಳಾಗಿ ಮಾತಾಡುವದಿಲ್ಲ. ಈ ಪತ್ರವನ್ನು ನೋಡು. (ಕೊಡುವಳು. ಕಮಲೆಯು ಓದಿಕೊಳ್ಳುವಳು. ತಾರೆಯು

ಕಮಲೆಯ ಮುಖಲಕ್ಷಣವನ್ನು ದಿಟ್ಟಿಸಿ ನೋಡುವಳು.

ಕಮಲೆ:—(ಆತ್ಮಗತಂ) ಈಗ ಗುಂಡೇರಾಯನ ವೇಷದಲ್ಲಿ ವ್ಯವಹರಿಸ ಬಂದವನು ಮೋಸಗಾರನೆಂದು ನಾನು ಈಗಾಗಲೆ ತರ್ಕಿಸಿದ್ದೆನು. ನನ್ನ ಈ ತರ್ಕವು ಈ ಪತ್ರದಿಂದ ನಿಜವಾದದ್ದೆಂಬದರಲ್ಲಿ ಸಂದೇಹವಿಲ್ಲದಾಯಿತು. ಇನ್ನು ಇನ್ನೊಬ್ಬನು ಬರುತ್ತಿರುವನು. ಅವನು ನಿಜವಾಗಿಯೂ ಗುಂಡೇರಾಯನೆ? ಅಥವಾ ಇವನಂತೆಯೆ ಅವನೊಬ್ಬ ಮೋಸುಗಾರನೆ? ಈಗ ಯಾವುದನ್ನೂ ನಿರ್ಧರಿಸಲಿಕ್ಕೆ ಬರುವದಿಲ್ಲ. ಮುಂದೆ ನಿಜಸಂಗತಿಯು ತಾನೆ ಹೊರಬೀಳುವದು. ಇನ್ನು ನಾನು ಆ ಹೊಸ ಮನುಷ್ಯನೊಡನೆಯೂ ಹೀಗೆಯೇ ವರ್ತಿಸುವೆನು. ಹತ್ತಿದರೆ ಹತ್ತಲಿ, ಹಾರಿದರೆ ಹಾರಲಿ! ಹತ್ತಿದರೆ ಲಾಭ; ಹಾರಿದರೆ ಹಾನಿಯೇನೂ ಇಲ್ಲ! (ಪ್ರಕಾಶವಾಗಿ) ಅಕ್ಕಾ, ಇದು ನಿಜವಾಗಿಯೂ ನನ್ನ ಪ್ರಿಯತಮನ ಪತ್ರವು ಈ ಅಕ್ಷರಗಳು ನನ್ನ ಸಂಪೂರ್ಣ ಪರಿಚಯದವು. ಅಕ್ಕಾ, ಹೆಚ್ಚಿಗೆ ಹೇಳಲೇನು? ಈ ಪತ್ರದಲ್ಲಿ ನನ್ನ ಪ್ರಿಯತಮನ ಮುಖವು ಅಡಗಿರುವದು ನನಗೆ ಅಸ್ಪಷ್ಟವಾಗಿ ಕಾಣುತ್ತಿದೆ. (ಪತ್ರವನ್ನು ಚುಂಬಿಸುವಳು.)

ತಾರೆ:—ನಿನ್ನ ಮಾತ ಕೇಳಿ ನನಗೆ ಅತ್ಯಾಶ್ಚರ್ಯವಾಗುತ್ತಿದೆ!

ಕಮಲೆ:—ಏಕೆ?

ತಾರೆ:—ಈ ಪತ್ರಲೇಖಕನು ನಿನ್ನ ಪ್ರಿಯತಮನಾದರೆ, ಈಗಿರುವವನು ಯಾರು?

ಕಮಲೆ:—ಇವನು ಮೋಸಗಾರನು. ಇವನೇ ನನ್ನ ಪತಿಯಾಗಿದ್ದರೆ ಹೀಗೆ ನನ್ನಿಂದ ದೂರ ಸರಿಯಲಿಕ್ಕೆ ಹವಣಿಸುತ್ತಿದ್ದನೆ? ಈ ಪುನರ್ಮಿಲನದ ಪ್ರಥಮ ರಾತ್ರಿಯಲ್ಲಿ ಸಿನೇಮಾದ ನೆವ ಮಾಡಿ ಓಡಿ ಹೋಗುತ್ತಿದ್ದನೆ?

ತಾರೆ:—ಹೀಗಿದ್ದರೆ ನೀನು ಮೊದಲು ಇವನೇ ನನ್ನ ನಾಥನೆಂದು ಹೇಗೆ ನಿರ್ಧಾರದಿಂದ ಹೇಳಿದೆ? ಆಗಿನ ನಿನ್ನ ಮಾತ ಕೇಳಿ, ಇವನು ಮೋಸಗಾರನಿರಬಹುದೆಂಬ ಸಂದೇಹವು ನಮಗೆ ರವಷ್ಟಾದರೂ ಉಳಿಯಲಿಲ್ಲ.

ಕಮಲೆ:—ಅಕ್ಕಾ, ಆಗ ಹೇಳಿದ್ದು ಸುಳ್ಳು. ಅದು ಚಿರವಿರಹಿಣಿಯಾದ ನನ್ನ ಮೋಹದ ಪರಿಣಾಮವು!

ತಾರೆ:—ಈಗಲೂ ಹಾಗೆಯೇ ಆಗಬಹುದು! ಚನ್ನಾಗಿ ಯೋಚಿಸಿ ನೋಡು! ಒಮ್ಮೆಲೆ ಪ್ರಿಯತಮನೆಂದು ದುಡುಕಬೇಡ.

ಕಮಲೆ:—ಅಕ್ಕಾ, ನಿನಗೆ ನನ್ನ ವಿಷಯದಲ್ಲಿ ದಯೆಯುಂಟಾಗುವದಿಲ್ಲವೆ? ಮನಸ್ಸಿಗೆ ಹತ್ತುವಂತೆ ಮಾತಾಡಿ, ನನಗೆ ಏಕೆ ವ್ಯಥೆಯನ್ನುಂಟು ಮಾಡುವೆ? ಯಾರೆ ಆಗಲಿ, ಒಮ್ಮೊಮ್ಮೆ ಮೋಸ ಹೋಗುವ ಸಂಭವವುಂಟು. ಒಮ್ಮೆ ಮೋಸಹೋಗಿ ಬುದ್ಧಿಗಲಿತ ಮನುಷ್ಯನು, ಮತ್ತೆಯೂ ವಂಚಕರ ಬಲಿಗೆ ಸಿಕ್ಕ್ಯಾನೆಂದು ಹೇಳಲಿಕ್ಕಾದೀತೆ? ಈ ಪತ್ರವು ನಿಜವಾಗಿಯೂ ನನ್ನ ಪ್ರಾಣವಲ್ಲಭನದು. ಇದರಲ್ಲಿ ತಿಲಪ್ರಾಯವೂ ಸಂದೇಹವಿಲ್ಲ!

(ಪತ್ರವನ್ನು ಎದೆಗೆ ಅವಚಿಕೊಳ್ಳುವಳು. ಚುಂಬಿಸುವಳು.)

———



## ೩ನೇ ಅಂಕ.

### ಮೊದಲನೆಯ ಪ್ರವೇಶ.

[ ತಾರೆಯೂ ಕಮಲೆಯೂ ಇರುವರು. ಚನ್ನನು ಬಂಡೇರಾಯನ ವೇಷದಲ್ಲಿ ಪ್ರವೇಶಿಸುವನು. ಕೆಂಚನು ಸಾಮಾನುಗಳನ್ನು ಹೊತ್ತುಕೊಂಡು ಹಿಂದೆ ಬರುತ್ತಿರುವನು. ]

ಕಮಲೆ (ಚನ್ನನ ಕಡೆಗೆ ತುಸ ಹೊತ್ತಿನ ವರೆಗೆ ನೋಡುತ್ತಿದ್ದು ಬಳಿಕ):— ನಾಥ....ಪ್ರಿಯತಮ....ದಯಿತ.... (ಎದುರ್ಗೊಂಡು ಹೋಗಿ ಆಲಿಂಗಿಸುವಳು.)

ಚನ್ನ:—ಜೀವಿತೇಶ್ವರಿ, ನೀನು ಇಲ್ಲಿರುವೆಯಾ? ನಿನ್ನ ಈ ದಾಸಾನುದಾಸನು ನಿನ್ನನ್ನು ಹುಡುಕಿಕೊಂಡು ಬಂದಿದ್ದಾನೆ ಚನ್ನಾಗಿ ಆಲಿಂಗಿಸು. ವಿರಹಾನಲದಿಂದ ದಹಿಸುತ್ತಿರುವ ನನ್ನೀ ಹೃದಯವನ್ನು ಶಾಂತಗೊಳಿಸು. (ತಾರೆಯೂ ಕೆಂಚನೂ ವಿಸ್ಮಯದಿಂದ ನೋಡುತ್ತಿರುವರು )

ಕಮಲೆ:—ಪ್ರಾಣನಾಥ, ನಿಮಗೆ ಈಗ ನನ್ನ ನೆನಪಾಯಿತೆ? ಈ ವರೆಗೆ ಈ ದಾಸಿಯನ್ನು ಮರೆತು ಬಿಟ್ಟಿದ್ದಿರಾ?

ಚನ್ನ:—ಪ್ರಿಯೆ, ಏನು ಮಾಡಲಿ? ದೊಡ್ಡ ವ್ಯವಹಾರದಲ್ಲಿ ತೊಡಗಿದ್ದೆನು. ಆಹಾರ-ನಿದ್ರೆಗಳಿಗೂ ಸಾಕಷ್ಟು ಸಮಯವು ದೊರೆಯುತ್ತಿದ್ದಿಲ್ಲ. ಹೀಗಿರಲು ಮನಸ್ಸು ಹರಿಯುತ್ತಿದ್ದರೂ, ನಿನ್ನ ದರ್ಶನಕ್ಕಾಗಿ ಹೊರಡುವ ಅನುಕೂಲತೆಯೊದಗುತ್ತಿದ್ದಿಲ್ಲ.

ತಾರೆ:—ಪುನರ್ಮಿಲಿತರಾದ ದಂಪತಿಗಳೆ, ನಾನು ಈಗ ನಿಮಗೆ ಕೆಲವು ಪ್ರಶ್ನೆಗಳನ್ನು ಕೇಳಬೇಕೆಂದಿದ್ದೇನೆ. ನನ್ನ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಕೊಡಿರಿ.

ಕಮಲೆ:—ಅಕ್ಕಾ, ಇನ್ನು ಆ ಪ್ರಶ್ನೋತ್ತರಗಳ ಅವಶ್ಯಕತೆಯಿಲ್ಲ. ಸುಮ್ಮನಿರು. ಬಹು ದಿನಗಳ ವಿರಹದ ತರುವಾಯ ಉಂಟಾದ ಈ ಪುನರ್ಮಿಲನದ ಮಹಾನಂದವನ್ನು ಸಂಪೂರ್ಣವಾಗಿ ಉಪಭೋಗಿಸುವ ಅನುಕೂಲತೆಯನ್ನು ನಮಗೊದಗಿಸಿ ಕೊಡು.

ತಾರೆ:-(ಆತ್ಮಗತಂ)ಇವನು ನಿಜವಾಗಿಯೂ ಗುಂಡೇರಾಯನಿರಬಹುದೆ? ಇವಳು ಗುಂಡೇರಾಯನ ಹೆಂಡತಿಯಾಗಿರಬಹುದೆ? ಇಲ್ಲವೆ ಇಬ್ಬರೂ ಮೋಸಗಾರರಾಗಿರಬಹುದೆ? ಈ ವಂಚಕರು ಮೊದಲೇ ಆಲೋಚನೆ ಮಾಡಿಟ್ಟು ಈ ಕಪಟನಾಟವನ್ನೇಕೆ ಹೂಡಿರಬಾರದು? (ಪ್ರಕಾಶರೀತಿಯಿಂದ)ತಂಗಿ, ನೀನು ಅಂದೂಹೀಗೆಯೇ ಆಚರಿಸಿದ್ದೆಯಲ್ಲವೆ?

ಕಮಲೆ:—ಪತಿಯ ಅಗಲುವಿಕೆಯಿಂದ ಉನ್ಮಾದಿನಿಯಾಗಿದ್ದ ನಾನು, ಅಂದು ಮೋಸ ಹೋದೆನು!

ತಾರೆ:—ಇಂದು?

ಕಮಲೆ:—ಇಂದು ಮೋಸದ ಲೇಶವೂ ಇಲ್ಲ. ಇವರು ನನ್ನ ಜೀವಿತೇಶ್ವರರು. ನಾನಿವರ ಅರ್ಧಾಂಗಿನಿಯು.

ಕೆಂಚ:—ಅಮ್ಮನವರೆ, ಈ ಸಾಮಾನುಗಳನ್ನು ಎಲ್ಲಿ ಇರಿಸಲಿ?

ತಾರೆ:—ಅಂತಸ್ತಿನ ಮೇಲಿನ ಕೋಣೆಯಲ್ಲಿರಿಸು.

ಕೆಂಚ:—ಒಬ್ಬ ಗುಂಡೇರಾಯರ ಸಾಮಾನುಗಳು ಅಲ್ಲಿರುವವು. ಈ ಗುಂಡೇರಾಯರ ಸಾಮಾನುಗಳನ್ನೂ ಅಲ್ಲಿಯೇ ಇರಿಸಲೇನು?

ತಾರೆ:—ಎಲೋ, ನಿನಗಿಷ್ಟು ಹಿರಿಯತನವೇಕೆ? ಹೇಳಿದಷ್ಟು ಕೇಳಬಾರದೆ?

ಕೆಂಚ:—ಅಮ್ಮನವರೆ, ನಾನು ನಿಮ್ಮ ಸೇವಕನಾಗಿರುವದು ನಿಜ. ನೀವು ಹೇಳಿದ ಮಾತನ್ನು ನಿರ್ವಿಚಾರದಿಂದ ಕೇಳುವುದೂ ನನ್ನ ಕರ್ತವ್ಯ! ಆದರೆ ಗುಂಡೇರಾಯರು ಹೀಗೆ ಸಾಲುಗಟ್ಟಿಕೊಂಡು ದಿನಕ್ಕೊಬ್ಬನಾಗಿ ಬರಹತ್ತಿದರೆ, ಇವರ ಸಾಮಾನುಗಳನ್ನು ಹೊತ್ತು ಹೊತ್ತು-ನನ್ನ ಹೆಗಲು ಬೊಗ್ಗಿಹೋದೀತು! ಕೋಣೆಯು ಈ ಅಭ್ಯಾಗತರ ಸಾಮಾನುಗಳಿಂದ ತುಂಬಿ ಕಾಲಿಡಲಿಕ್ಕೆ ಸ್ಥಳವಿಲ್ಲದಾಗಿ ಹೋದೀತು.

ತಾರೆ:—ಆಗಲಿ ಹೋಗು. ಗುಂಡೇರಾಯ ಮೂರ್ತಿಗಳೆಷ್ಟಿವೆಯೊ ಪರೀಕ್ಷಿಸೋಣ. ಒಬ್ಬನೇ ಗುಂಡೇರಾಯನು ಹೀಗೆ ಬೇರೆ ಬೇರೆ ವೇಷಗಳನ್ನು ಧರಿಸಿ ಬರುತ್ತಿರುವನೇ? ಇಲ್ಲವೆ ಹಲವರು ವಂಚಕರು ಲಕ್ಷ ರೂಪಾಯಿಗಳ ಆಶೆಯಿಂದ ಗುಂಡೇರಾಯನ ವೇಷದಿಂದ ಬಂದಿರುವರೆ?

ಎಂಬುದರ ನಿರ್ಣಯವು ಮುಂದೆ ತಾನೇ ತಾನಾಗಿ ಆಗುವದು!

ಕೆಂಚ:—[ಚನ್ನನ ಹತ್ತರ ಬಂದು ಚನ್ನಾಗಿ ನಿರೀಕ್ಷಿಸಿ, (ಆತ್ಮಗತಂ) ಇವನು ನಮ್ಮ ಚನ್ನನಂತೆ ಕಾಣುತ್ತಿದ್ದಾನೆ. ಗುಂಡೇರಾಯನೆಂದು ಹೇಳಿ ಕೊಳ್ಳುತ್ತಾನೆ. ಇದರ ರಹಸ್ಯವೇನು? ಚನ್ನಾಗಿ ಪರೀಕ್ಷಿಸುವೆನು. (ಚನ್ನನ ಅಂಗಿಯನ್ನು ಹಿಡಿದು ಜಗ್ಗುವನು.) ಚನ್ನನು ಇವನ ಕಡೆಗೆ ನೋಡದೆ, ಕಮಲೆ ಯೊಡನೆ ಮಾತಾಡುವದರಲ್ಲಿ ವ್ಯಸ್ತನಾಗಿರುವನು. ಕೆಂಚನು ಚನ್ನನನ್ನು ಮೆಲ್ಲನೆ ದೂಡುವನು.]

ಚನ್ನ:—ಮೂರ್ಖನೆ ಸುಮ್ಮನಿರು. (ಕೆಂಚನ ಕೆನ್ನೆಯ ಮೇಲೆ ಹೊಡೆಯು ವನು.)

ಕೆಂಚ:—ನಮ್ಮ ಚನ್ನನು ಇವನಲ್ಲ. ಇವನು ಚನ್ನನಾಗಿದ್ದರೆ ಹೀಗೆ ಹೊಡೆಯುತ್ತಿದ್ದನೆ?

ತಾರೆ:—ಎಲೋ ಮೂರ್ಖ, ಹೀಗೆ ಬಾಯ್ದೆರೆದು ನಿಂತರೇನು? ಆ ಸಾಮಾನುಗಳನ್ನು ತಕ್ಕೊಂಡು ಹೋಗು.

ಕೆಂಚ:—ಹೋಗುವೆನು. (ಹೋಗುವನು.)

ಕಮಲೆ-—ಪ್ರಿಯನೆ, ಬಹು ದಿವಸಗಳ ಅಗಲುವಿಕೆಯ ತರುವಾಯ ಕೂಡಿದ್ದೇವೆ. ಇನ್ನು ನಾನು ನಿಮ್ಮನ್ನು ನನ್ನ ಕಣ್ಮರೆಯಾಗಗೊಡುವುದಿಲ್ಲ. ನಾನು ಯಾವಾಗಲೂ ನನ್ನ ಪ್ರೇಮಪಾಶದಿಂದ ನಿಮ್ಮನ್ನು ಬಂಧಿಸಿರಿಸುವೆನು.

ಚನ್ನ:—ಪ್ರಿಯೆ, ಇನ್ನು ನಾನು ನಿನ್ನ ಬಡಿಗೆಯ ಹೊಡತಕ್ಕೆ ಹೆದರಿ ಓಡಿ ಹೋಗಬಯಿಸುವುದಿಲ್ಲ. ನಿನ್ನ ದಾಸಾನುದಾಸನಾಗಿ ನಿನ್ನ ಸನ್ನಿಧಿ ಯಲ್ಲಿಯೇ ಇರುವೆನು.

ತಾರೆ:—ತಂಗಿ, ನೀನು ಕೊಂಚ ಇತ್ತ ಬಾ. ನಾನು ನನ್ನ ಮೈದುನ ನನ್ನು ಮಾತಾಡಿಸಬೇಕಾಗಿದೆ.

ಕಮಲೆ:—ಅಕ್ಕಾ, ನೀನು ನಿನ್ನ ಮೈದುನನನ್ನು ಮಾತಾಡಿಸಬೇಕಾ ದರೆ, ನಾನೇಕೆ ಅತ್ತ ಬರಬೇಕು? ನೀನು ಅಲ್ಲಿಯೇ ನಿಂತು ಮೈದುನನನ್ನು ಮಾತಾಡಿಸಲಾರೆಯಾ? ನೀನು ಹೀಗೆ ಮೇಲುಬಿದ್ದು ಮಾತ ಬಳೆಸುವುದರಲ್ಲಿ ಪ್ರಯೋಜನವಿಲ್ಲ.

ತಾರೆ:—ಒಳ್ಳೇ ಕಠಿಣವಿದು! ಆಗಲಿ ಮೈದುನನೆ, ನೀನು ಇಷ್ಟು ದಿವಸ ಎಲ್ಲಿದ್ದೆ? ಅಲ್ಲಿ ಎಲ್ಲವೂ ನೆಟ್ಟಗಷ್ಟೇ?

ಕಮಲೆ:—ಪ್ರಿಯನೆ, ನೀನು ಬಹು ನಿಷ್ಠುರನು. ಹೊರಡುವ ಮುಂದೆ ನನಗೊಂದು ಪತ್ರವನ್ನಾದರೂ ಬರೆಯಬಾರದೆ?

ತಾರೆ:—ನಿನ್ನ ಮೋರೆಯ ಲಕ್ಷಣವು ಬದಲಾಯಿಸಿ ಹೋಗಿದೆ. ನನಗಂತೂ ಗುರತೇ ಹತ್ತದಂತಾಗಿದೆ.

ಕಮಲೆ:—ಪ್ರಿಯರೆ, ನೀವು ಹೆದರುವ ಕಾರಣವಿಲ್ಲ. ಇವಳು ನಿಮ್ಮನ್ನು ಗುರತಿಸದಿದ್ದರೂ, ನಾನು ಸಂಪೂರ್ಣ ರೀತಿಯಿಂದ ಗುರತಿಸಿದ್ದೇನೆ.

ತಾರೆ:—ಏಕೆ ಮೈದುನನೆ, ಮಾತಾಡಲೊಲ್ಲೆಯಲ್ಲ!

ಚನ್ನ:—ಅತ್ತಿಗೆ, ನೀವಿಬ್ಬರೂ ನಿಮ್ಮ ಮಾತಿನ ಹೊಡೆತದಲ್ಲಿ ನನಗೆ ಮಾತಾಡಲಿಕ್ಕೆ ಅವಕಾಶವನ್ನೇ ಕೊಡಲಿಲ್ಲವಲ್ಲ! ನೀವಿಬ್ಬರೂ ಹೀಗೆ ಪ್ರಶ್ನೆಗಳ ಮಳೆಗರೆಯ ಹತ್ತಿದರೆ, ನಾನು ಉತ್ತರ ಕೊಡುವದಾದರೂ ಹೇಗೆ?

ತಾರೆ:—ಆಗಲಿ. ಈಗ ಮೊದಲು ನನ್ನ ಪ್ರಶ್ನೆಗಳಿಗೆ ಉತ್ತರ ಕೊಡು.

ಕಮಲೆ:—ಆಗದು! ಮೊದಲು ನನ್ನ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ದೊರೆಯಲಿಕ್ಕೆ ಬೇಕು!

ತಾರೆ:—ನಾನು ಇವನ ಅತ್ತಿಗೆಯಲ್ಲವೆ? ನಿಮ್ಮಿಬ್ಬರಿಗಿಂತ ನಾನು ಹಿರಿಯಳು!

ಕಮಲೆ:—ಆದರೇನಾಯಿತು? ನಾನು ಇವರ ಅರ್ಧಾಂಗಿನಿಯು!

ತಾರೆ:—ತಂಗಿ, ಇವನು ನಿನ್ನವನು. ನೀನಿವನೊಡನೆ ಬೇಕಾದಷ್ಟು ಮಾತಾಡಬಹುದು. ಇವನ ಚಿರಸಹವಾಸಿನಿಯಾಗಿರಬಹುದು. ನಾನು ಅತಿಥಿಸ್ವರೂಪಿಣಿಯು ಮಾತ್ರ! ಒಂದೆರಡು ಪ್ರಶ್ನೆಗಳನ್ನು ಕೇಳಿಕೊಂಡು ಬಿಡುವೆನು.

ಕಮಲೆ:—ಅಕ್ಕಾ, ಹೀಗೆ ಬಿಡತಕ್ಕವಳು ನೀನಲ್ಲ. ನೀನು ಇಪ್ಪಿಯ ಕಂಟಿಯಿದ್ದಂತೆ. ಒನ್ನೆ ಗಂಟುಬಿದ್ದಿಯೆಂದರೆ, ದೂರ ಸರಿಸುವದು ಬಹು ಕಷ್ಟ! ಇದರ ಅನುಭವವನ್ನು ತಕ್ಕೊಂಡು ಬುದ್ಧಿಗಲಿತ ನಾನು, ಇನ್ನು ನಿನ್ನ ಈ ಬಣ್ಣದ ಮಾತುಗಳಿಗೆ ಬಲಿ ಬೀಳತಕ್ಕವಳಲ್ಲ!

ತಾರೆ (ನಕ್ಕು):—ತಂಗಿ, ಅವನು ಮೋಸಗಾರನು. ಅವನೊಡನೆ ಘನಿಷ್ಠ ಸಂಬಂಧವಾಗದಿದ್ದುದೆ ಒಳಿತೆಂದು ಈಗ ನಿನಗೆ ಅನಿಸುವದಿಲ್ಲವೆ? ನಿಜವಾಗಿ ಯೋಚಿಸಿದರೆ, ನಾನು ನಿನ್ನ ಅಹಿತ ಮಾಡಿರದೆ, ಹಿತ ಮಾಡಿರುವೆನು. ಮೇಲಾಗಿ ಅವನು ಮೋಸಗಾರನು; ಇವನು ನಿಜವಾಗಿಯೂ ಗುಂಡೇರಾಯನು!

ಕಮಲೆ:—ಅಕ್ಕಾ, ನೀನೆನ್ನುವುದು ಸರಿಯಾದರೂ, ನಾನು ನಿರ್ಭಯದಿಂದ ನನ್ನ ಈ ಪತಿಯನ್ನು ನಿನ್ನ ಸ್ವಾಧೀನ ಪಡಿಸಲಾರೆನು. ಗಂಡಸರ ಚಿತ್ತ! ಹೇಗೆ ಹೊರಳುವದೆಂಬದನ್ನು ಹೇಳಲಿಕ್ಕಾಗದು! ಮೇಲಾಗಿ ನಾನು ಬಹು ದಿನಗಳಿಂದ ವಿರಹವ್ಯಥೆಯನ್ನನುಭವಿಸುತ್ತ ಬಂದವಳು. ಯಾತನೆಯನ್ನು ಸಹಿಸಿದವಳು. ಈಗೊದಗಿದ್ದ ಸಮ್ಮಿಲನ ಸುಖವನ್ನು ಸಂಪೂರ್ಣವಾಗಿ ಅನುಭವಿಸಲಿಕ್ಕೆ ಹಪಾಪಿಸಿದವಳು. ಹೀಗಿರುತ್ತಿರಲು, ನೀನು ನಡುವೇ ಅಡ್ಡ ಬಂದು, ಹೀಗೆ ಅಡ್ಡಿಯನ್ನುಂಟುಮಾಡುವುದು ತರವೆ?

ತಾರೆ:—ನಾನು ನಿಮ್ಮ ಸುಖಕ್ಕೆ ಅಡ್ಡಿ ಮಾಡತಕ್ಕವಳಲ್ಲ; ಮತ್ಸರದಿಂದ ಕುದಿಯುವವಳೂ ಅಲ್ಲ. ಇವನು ಅನ್ಯನಲ್ಲ; ಆತ್ಮೀಯನು-ವೈದುನನು. ಮನೆಗೆ ಬಂದ ಬಳಿಕ ಒಂದೆರಡು ಮಾತುಗಳನ್ನಾದರೂ ಆಡಬಾರದೆ? ನಾನು ಮಾತಾಡಿಸಿ ಹೋಗುವೆನು. ಬಳಿಕ ನೀವು ನಿಮ್ಮ ಇಷ್ಟದಂತೆ ಸುಖಭೋಗಿಸಬಹುದು.

ಚನ್ನ:—ಆಗಲಿ, ನನ್ನದೇನೂ ಅಡ್ಡಿಯಿಲ್ಲ.

ತಾರೆ:—ತಂಗೀ, ನಾನು ದೂರ ನಿಂತೇ ಮಾತಾಡುವೆನು. ನೀನು ಮಾತ್ರ ಮೋಸ ಹೋಗದಿರು. ಒಮ್ಮೆ ಮೋಸ ಹೋಗಿರುವುದನ್ನು ಯಾವಾಗಲೂ ಮನಸ್ಸಿನಲ್ಲಿಟ್ಟುಕೊಂಡು ಎಚ್ಚರಿಕೆಯಿಂದ ವರ್ತಿಸು; ಯಾಕೆಂದರೆ, ಮುಂದೆ ಇವನೂ ಮೋಸಗಾರನೆಂದು ನಿರ್ಣಯವಾದರೆ, ನಿನ್ನ ದುಃಖಕ್ಕೆ ಪಾರಾವಾರವಿಲ್ಲದಾದೀತು! ಇರಲಿ. ವೈದುನನೆ, ನೀನು ಮಲೆಯಾಳದ ಹೆಂಗಸನ್ನು ಲಗ್ನ ಮಾಡಿಕೊಂಡಿದ್ದಿಯಲ್ಲವೆ?

ಚನ್ನ:—ಏನನ್ನುತ್ತಿರುವೆ?.....ಮಲೆಯಾಳದ ಹೆಂಗಸೆ?....ಅವಳನ್ನು ನಾನು ಮದುವೆ ಮಾಡಿಕೊಂಡಿದ್ದೆನೆ?....ಆಹುದು. ನಾನು ಮಲೆಯಾಳಕ್ಕೆ

ಹೋಗಿ ವಾಸವಾಗಿದ್ದೆನು. ಅಲ್ಲಿಯೆ ವಿವಾಹಿತನಾದೆನು. ಈ ಸುದ್ದಿಯನ್ನು ನೀನು ಕೇಳಿದ್ದೆಯಷ್ಟೆ?

ತಾರೆ:—ಇರಲಿ. ಈಗ್ಗೆ ಸುಮಾರು ಐದು ವರ್ಷಗಳ ಹಿಂದೆ ನಿನ್ನ ಆ ಮಲೆಯಾಳದ ಮಡದಿಯು ನಿನ್ನೊಡನೆ ಕಲಹಪ್ರವೃತ್ತಳಾಗಿ ಕೋಪ ಗೊಂಡು ನಿನಗೆ ಡೊಣ್ಣೆಯ ಏಟು ಕೊಟ್ಟಳಂತೆ!

ಚನ್ನ:—ಇದನ್ನೂ ನೀನು ಕೇಳಿರುವಿಯಾ? ನಾನು ಈ ಸಂಗತಿಯು ಗುಪ್ತವಿದ್ದೀತೆಂದು ಬಗೆದಿದ್ದೆನು. ನಾನು ನಿಮ್ಮನ್ನು ಮರೆದಿದ್ದರೂ, ನೀವು ನನ್ನನ್ನು ಮರೆದಿಲ್ಲ. ನನ್ನ ಯಾವತ್ತು ಸಂಗತಿಯನ್ನು ತರಿಸಿ ಸಂಗ್ರಹಿಸಿ ಟ್ಟಿರುವಿರಿ!

(ವಿಧವೆಯು ಬರುವಳು.)

ವಿಧವೆ:—ಅಪ್ಪಾ, ಗುಂಡೇರಾಯಾ, ಯಾವಾಗ್ಗೆ ಬಂದೆ? ಏನು ಮಾಡುವದಿದೆಯಪ್ಪಾ! ಬಂಡೇರಾಯನೊಬ್ಬನು ನಮ್ಮ ಕೈ ಬಿಟ್ಟು ಹೋ-ದನು. ಅಯ್ಯೋ! ಬಂಡೇರಾಯ............(ಎದೆ ಎದೆ ಬಡಕೊಂಡು ಅಳಹತ್ತಿ ದಳು. ಚನ್ನನು ಗಾಬರಿಯಾಗಿ ಹಿಂದೆ ಸರಿದನು.)

ತಾರೆ:—ಮೈದುನನೆ, ಇವಳು ನಿನ್ನ ಸೋದರತ್ತೆ, ನಮಸ್ಕಾರಮಾಡು.

ಚನ್ನ(ನಮಸ್ಕರಿಸಿ):—ಅತ್ತೀ, ಆದದ್ದಾಯಿತು. ಇನ್ನು ಅದಕ್ಕಾಗಿ ಅತ್ತು-ಕರೆದು ಪ್ರಯೋಜನವಿಲ್ಲ. ಸುಮ್ಮನಾಗು. ನಿನ್ನ ಊರ ಕಡೆಯ ಸುದ್ದಿಯು ಒಳಿತಷ್ಟೆ? ಮನೆಯಲ್ಲಿಯ ಜನರೆಲ್ಲರೂ ನೆಟ್ಟಗಿದ್ದಾರಷ್ಟೆ? ನಿನ್ನ ಮೈದುನ ರಂಗರಾಯನು ನೆಟ್ಟಗಿರುವನೆ? ಅವನ ಆ ಕರಿಬಣ್ಣದ ಮಗಳು.... ಹಾಂ, ಅವಳ ಹೆಸರು ಯಮುನೆ. ನೆಟ್ಟಗಿದ್ದಾಳೆಯೆ? ಊರ ಮುಂದಿನ ಭತ್ತದ ಗದ್ದೆಯ ಬೆಳೆ ನೆಟ್ಟಗಿದೆಯೆ?............

ವಿಧವೆ:—(ಆಶ್ಚರ್ಯಾತಿಶಯದಿಂದ ಕೇಳಿ, ಬಳಿಕ ಮುಗುಳು ನಗ ನಕ್ಕು) ಊರ ಕಡೆಯ ಸುದ್ದಿಯೆಲ್ಲವೂ ಒಳಿತಾಗಿದೆ. ಎಲ್ಲರೂ ಕ್ಷೇಮದಿಂದಿರುವರು....

ಚನ್ನ:—ಅತ್ತೀ, ನಾನು ಯಾರನ್ನು ಮರೆದರೂ ನಿನ್ನನ್ನು ಮರೆಯು ವಂತಿಲ್ಲ. ಈಗಲೂ ನನಗೆ ನನ್ನ ಆ ಚಿಕ್ಕ ವಯಸ್ಸಿನಲ್ಲಿಯ ಹಲವು ಸಂಗತಿ ಗಳು ನೆನಪಿವೆ. ನೀನು ಉಣಿಸಿದ ಹೊರತು ನನಗೆ ಹೊಟ್ಟೆ ತುಂಬುತ್ತಿ

ದ್ದಿಲ್ಲ. ಅಡುಗೆಯನ್ನಾದರೂ ಎಷ್ಟು ರುಚಿಕರ ಮಾಡುತ್ತಿದ್ದೆ! ನೀನು ಮಾಡಿದ ದಳಿಯ ಉಂಡಿಗಳು ಅಮೃತಕ್ಕಿಂತಲೂ ರುಚಿಕರವಾದವುಗಳು!

ವಿಧವೆ:—ಅಪ್ಪಾ, ನೆನಪಿದೆಯೆ? ಇಷ್ಟು ದಿನಗಳು ಕಳೆದು ಹೋಗಿದ್ದರೂ ನೀನದನ್ನು ಮರೆತಿಲ್ಲವಲ್ಲವೆ? ನನ್ನ ಗುಂಡೇರಾಯ, ಒಳ್ಳೇ ಬುದ್ಧಿವಂತ! ಅಪ್ಪಾ, ಈ ವಂಶದಲ್ಲಿ ದೀಪಕನು ನೀನೊಬ್ಬನು ಮಾತ್ರ ಉಳಿದಿರುವೆ! ನಿನ್ನಿಂದಲೇ ಈ ಮನೆತನದ ಉದ್ಧಾರವಾಗಬೇಕಾಗಿದೆ! ಸಕಲ ಸೌಭಾಗ್ಯಗಳಿಂದ ಯುಕ್ತನಾಗಿ ಬಹು ಕಾಲ ಬಾಳು!

ತಾರೆ:—ಇವರ ಮಾತುಗಳನ್ನು ಕೇಳಿದರೆ, ತುಂಬ ಆಶ್ಚರ್ಯವಾಗುತ್ತಿದೆ. ಈ ಮೂವರೂ ಮೋಸಗಾರರಾಗಿದ್ದು, ಮೊದಲು ಬೇತು ಮಾಡಿಕೊಂಡು ಈ ಮನೆಯನ್ನು ಹೊಕ್ಕಿರಬಹುದು? ಇಲ್ಲದಿದ್ದರೆ ಭಿನ್ನ ಭಿನ್ನ ಸ್ಥಳಗಳಿಂದ ಬಂದು ಏಕತ್ರಿತರಾಗಿದ್ದ ಈ ಮೂವರು ಅಲ್ಪಾವಧಿಯಲ್ಲಿಯೇ ಹೀಗೆ ಸ್ನೇಹಬದ್ಧರಾದುದು ಹೇಗೆ? ನಾನು ಬೇಗನೆ ಇದರ ರಹಸ್ಯವನ್ನರಿತುಕೊಳ್ಳಲಿಕ್ಕೇ ಬೇಕು. (ಹೋಗುವಳು.)

ಕಮಲೆ:—ಪ್ರಿಯರೆ, ನಡೆಯಿರಿ. ನಾವಿನ್ನು ವಿಶ್ರಮಿಸೋಣ.

ವಿಧವೆ:—ಅಪ್ಪಾ, ಗುಂಡೇರಾಯ, ನಡೆ ಒಳಗೆ ಹೋಗೋಣ.

(ಎಳೆಯುವಳು.)

ಕಮಲೆ:—ನಾಥ, ನೀವು ಇವಳ ಬೆನ್ನ ಹತ್ತಿ ಹೋಗ ಕೂಡದು! ನನ್ನೊಡನೆ ಬರಲಿಕ್ಕೆ ಬೇಕು. (ಜಗ್ಗುವಳು.)

ವಿಧವೆ:—ಹೊಯ್ಮಾಲೆಯೆ, ನಡೆಯತ್ತ! ನನ್ನೆದುರಿನಲ್ಲಿ ಗಂಡನ ಮೇಲೆ ಅಧಿಕಾರ ನಡಿಸಲಿಕ್ಕೆ ನಿನಗೆ ನಾಚುಗೆಯಾಗುವದಿಲ್ಲವೆ? ಈಗಿನ ಹೆಂಗಸು! ಹಿರಿಯಳು-ಕಿರಿಯರು ಎಂಬ ಭಾವನೆಯಿಲ್ಲ! ಹೆಂಗಸರೇ ಇವರು? ಅಲ್ಲ, ರಕ್ಕಸಿಯರು! ಅಪ್ಪಾ, ಗುಂಡೇರಾಯ, ನೀನು ಈ ಮಾಟಗಾತಿಯ ಮೋಸಕ್ಕೊಳಗಾಗಬೇಡ! ನಡೆ. (ಎಳೆಯುವಳು. ಮತ್ತೊಂದು ಕಡೆಯಿಂದ ಕಮಲೆಯು ಜಗ್ಗುವಳು ಚನ್ನನು ಪೇಚಿನಲ್ಲಿ ಬೀಳುವನು.

ಇಬ್ಬರೂ ಚನ್ನನನ್ನು ಎಳಕೊಂಡು ಹೋಗುವರು.)

---

## ೨ನೆಯ ಪ್ರವೇಶ.

[ತಾರೆಯೂ ವಸ್ತ್ರಾವೃತನಾದ ಬಂಡೇರಾಯನೂ ಇರುವರು.]

ತಾರೆ:—ನನಗೆ ಏನೂ ತಿಳಿಯದಾಗಿದೆ! ಅವನು ನಿಜವಾಗಿಯೂ ಗುಂಡೇರಾಯನಾದಾನೇನು? ಮನೆಯಲ್ಲಿ ಮೂವರೂ ಚಕ್ಕಂದದಿಂದಿದ್ದಾರೆ. ಪಿಡುಗು ಬಂದಿರುವುದು ನನಗೆ! ಮುಂದೇನ ಮಾಡಲಿ? 'ಹೊರಗಿನ ದೆವ್ವಗಳು ಬಂದು ಮನೆಯ ಮಂದಿಯನ್ನು ಓಡಿಸಿ ಬಿಡುವವು' ಎಂದು ಹಿರಿಯರು ಹೇಳುತ್ತಾರೆ ನನ್ನ ಅವಸ್ಥೆಯು ಹೀಗೆಲ್ಲಿ ಆಗುವದೋ ಏನೋ! ಪ್ರಿಯನೆ, ಮುಂದಿನ ಗತಿಯೇನು? (ಕಣ್ಣು ನೀರೆ ಮಾಡುವಳು.)

ಬಂಡೇರಾಯ:—ಪ್ರಿಯೆ, ನನ್ನ ಅವಸ್ಥೆಯು ನಿನಗಿಂತಲೂ ಶೋಚನೀಯವಾಗಿದೆ! ನೀನು ಹೇಗಾದರೂ ಮಾಡಿ ಈ ಮನೆಯಲ್ಲಿರಬಲ್ಲೆ! ಜನರೊಡನೆ ಮಾತಾಡಿ ಹೊತ್ತುಗಳೆಯಬಲ್ಲೆ! ಆದರೆ ನನ್ನ ಹಣೆಯ ಬರಹದಲ್ಲಿ ಇದೂ ಇಲ್ಲ! ಯಾಕೆಂದರೆ ನಾನು ಒಮ್ಮೆ ಸತ್ತವನಾಗಿದ್ದೇನೆ! ಇನ್ನು ನಾನು ಈ ಮನೆಯಲ್ಲಿರಬೇಕಾದರೆ ಭೂತವಾಗಿರಬೇಕು! ಅಡಗಿರಬೇಕು! ಯಾರೊಡನೆಯೂ ಮಾತನಾಡಲಾಗದು. ನಿನಗೆ ದಯೆಯುಂಟಾದಾಗ ಕ್ಷಣಕಾಲ ಮಾತ್ರ ಕದ್ದು ನಿನ್ನೊಡನೆ ಮಾತಾಡಬೇಕು! ಪ್ರಿಯೆ, ಇದೆಂತಹ ತಾಪದಾಯಕವೆಂಬದನ್ನು ಯೋಚಿಸಿ ನೋಡು!

ತಾರೆ:—ಪ್ರಾಣನಾಥ, ಹೀಗೆಂದರೆ ಹೇಗೆ? ನಿಮಗೆ ದುಃಖವಾಗಬೇಕೆಂದು ನಾನು ಹೀಗೆ ಮಾಡಿದ್ದೇನಾದೀತೇ? ನಿಮಗೆ ಒಳಿತಾಗಬೇಕೆಂಬ ಸದುದ್ದೇಶದಿಂದಲೇ ನಾನು ಈ ಆಟವನ್ನು ಹೂಡಲಿಲ್ಲವೆ? ದೈವವು ನಮ್ಮ ವಿಷಯದಲ್ಲಿ ಅಪ್ರಸನ್ನವಾಗಿದೆ; ಆದರೂ ನೀವು ಭಯಗೊಂಡು ಹಿಂಜರಿಯಬಾರದಾಗಿದೆ. ವಿಪತ್ಸಮಯದಲ್ಲಿ ಕೈ-ಕಾಲ ಕಳೆದುಕೊಳ್ಳದೆ, ಧೈರ್ಯದಿಂದ ಮುಂದಡಿಯಿಡಲಿಕ್ಕೆ ಯತ್ನಿಸುವುದು ಪುರುಷಲಕ್ಷಣವು. ಸಂಕಟಕಾಲದಲ್ಲಿ ಹೆದರಿ ಹಿಂಜರಿಯುವುದು ಹೇಡಿತನವು. ಇದು ಹೆಂಗಸರಿಗೆ ಮಾತ್ರ ಸಲ್ಲತಕ್ಕದ್ದು ಗಂಡಸರಾದ ನೀವು ಈ ಸಮಯದಲ್ಲಿ ನಿಮ್ಮ ಪೌರುಷವನ್ನು ಪ್ರಕಟಿಸಲಿಕ್ಕೇ ಬೇಕು. ಹಂಚಿಕೆಯನ್ನು ಹುಡುಕಿ, ಸಂಕಟಗಳಿಂದ ಪಾರಾಗಿ, ಕೃತಕಾರ್ಯರಾಗಲಿಕ್ಕೇ ಬೇಕು.

ಬಂಡೇರಾಯ:--ಪ್ರಿಯೆ, ಮೊದಲು ಆಡ್ಡಹಾದಿಯನ್ನು ಹಿಡಿಸಿದವಳು ನೀನು! ನಾನು ನಿನ್ನಲ್ಲಿ ವಿಶ್ವಾಸವಿರಿಸಿದವನಾಗಿ ಮುಂದಿನ ಫಲವನ್ನು ಯೋಚಿಸಿ ಕೆಟ್ಟು ಹೋದೆನು. ಈಗ ನೀನು ಪೌರುಷವನ್ನು ತೋರಿಸೆಂದು ಹೇಳುತ್ತಿರುವೆಯಲ್ಲವೆ? ನಾನು ಪೌರುಷವನ್ನು ಹೇಗೆ ತೋರಿಸಲಿ? ನಾನು ಎಂದೆಂದಿಗೂ ನಿನ್ನ ಆಲೋಚನೆಯಂತೆ ನಡೆಯುತ್ತ ಬಂದವನು! ಸ್ವಂತದ ಬುದ್ಧಿಯನ್ನು ಎಂದೋ ನಿನಗೆ ಮಾರಿಕೊಂಡು ಬಿಟ್ಟಿದ್ದೇನೆ.

ತಾರೆ:—ಪ್ರಿಯ, ನಾನು ಹೆಂಗಸು. ನನ್ನ ಆಲೋಚನೆಯಂತೆ ನಡೆಯಲೇಬೇಕೆಂದು ನಾನು ನಿಮಗೆ ಎಂದೂ ಆಗ್ರಹ ಮಾಡಿದವಳಲ್ಲ; ಆದರೂ ಈಗ ನೀವು ಎಲ್ಲ ಭಾರವನ್ನು ನನ್ನ ಮೇಲೆಯೇ ಹೇರಬಯಸುತ್ತಿರುವಿರಿ. ಈಗ ಈ ವಿಷಯವಾಗಿ ನಿಮ್ಮೊಡನೆ ವಾದ-ವಿವಾದ ಮಾಡುತ್ತ ಕಾಲ ಕಳೆಯುವ ಮನಸ್ಸು ನನಗಿಲ್ಲ! ಈ ಸಮಯವೆಂಥದೆಂಬದನ್ನು ಆಲೋಚಿಸಿರಿ. ಕಾರ್ಯಪ್ರವೃತ್ತರಾಗಿರಿ. ಅಪರಾಧವು ಯಾರದೇ ಇರಲಿ, ಪರಿಣಾಮವನ್ನು ಮಾತ್ರ ಇಬ್ಬರೂ ಭೋಗಿಸಲೇ ಬೇಕಾಗುವದೆಂಬದನ್ನು ಮರೆಯದಿರಿ.

ಬಂಡೇರಾಯ:—ನನಗಿದು ತಿಳಿಯುವದಿಲ್ಲವೆಂದಲ್ಲ; ಆದರೆ ಮುಂದೇನ ಮಾಡಬೇಕೆಂಬುದು ಗೊತ್ತಾಗಲೊಲ್ಲದು! ಏನ ಮಾಡಲಿ? ಯಾರನ್ನು ವಿಚಾರಿಸಲಿ? ಈ ಸಮಯದಲ್ಲಿ ಯಾರು ನಮಗೆ ಸಹಾಯಕರಾದಾರು? ಯಾರನ್ನು ಮೊರೆ ಹೋಗೋಣ?

ತಾರೆ:—ಅನ್ಯರ ಸಹಾಯಕ್ಕಾಗಿ ಅಲೆಯುವದು ಬೇಡ. ನಮ್ಮ ಒಳಸಂಚು ಮೂರನೆಯವನ ಕಿವಿಕೇಳುವುದು ನಮಗೆ ಹಿತಕರವಲ್ಲ! ಸ್ತ್ರೀ ಬುದ್ಧಿಯೆಂದು ನೀವು ನನ್ನನ್ನು ನಿಂದಿಸುತ್ತಿರುವಿರಷ್ಟೇ? ಆದರೆ ನಾನೇ ನಿಮ್ಮ ಉದ್ಧಾರಕಳೆಂಬದನ್ನು ಮರೆಯದಿರಿ. ನೀವು ಇನ್ನು ಭೂತಜನ್ಮದಲ್ಲಿ-ಬಂಡೇರಾಯನ ವೇಷದಲ್ಲಿ ಗೌಪ್ಯವಾಗಿರ್ರಿ. ನಾನು ಸಮಯವರಿತು ನಿಮಗೆ ಆ ವಂಚಕರ ದರ್ಶನ ಮಾಡಿಸುವೆನು. ಆ ಸಮಯದಲ್ಲಿ ನೀವು 'ಹೊತ್ತು ಬಂದಂತೆ ಕೊಡಿ ಹಿಡಿದು' ಭಯದೋರಿಯಾಗಲಿ, ವಿನಯಪ್ರದರ್ಶನ ಮಾಡಿಯಾಗಲಿ, ಕಾರ್ಯವನ್ನು ಸಾಧಿಸಿಕೊಳ್ಳಿರಿ. ಅವರು ವಂಚಕರೆಂಬದರಲ್ಲಿ ಸಂದೇಹವಿಲ್ಲ; ಆದರೆ ಅವರ ಮೋಸಗಾರಿಕೆಯನ್ನು ನಾವು ಕುಶಲತೆಯಿಂದ

ಬೈಲಿಗೆಳೆಯಬೇಕಾಗಿದೆ.

ಬಂಡೇರಾಯ:—ಸ್ತ್ರೀ ಬುದ್ಧಿಯು ತಾರಕವೇ ಆಗಲಿ, ಮಾರಕವೇ ಆಗಲಿ! ನಿನ್ನಲ್ಲಿ ಏಕಾಂತ ಅನುರಕ್ತನಾದ ನಾನು, ನಿನ್ನ ಆಲೋಚನೆಯಂ ತೆಯೇ ನಡೆಯಬೇಕೆಂದು ನಿರ್ಧರಿಸಿಕೊಂಡಿದ್ದೇನೆ. ಸೂತ್ರಧಾರಳು ನೀನು; ಕುಣಿಸಿದಂತೆ ಕುಣಿಯುವವನು ನಾನು!

ತಾರೆ:—ಆಗಲಿ, ಈಗ ನೀವು ಮರೆಯಲ್ಲಿ ಹೋಗಿರಿ. ನಾನು ಅವರ ಹತ್ತಿರ ಹೋಗಿ ಹರಟೆಯನ್ನಾರಂಭಿಸುವೆನು ಸಮಯವರಿತು ನಿಮಗೆ ಸೂಚನೆ ಕೊಡುವೆನು. (ಹೋಗುವಳು)

ಬಂಡೇರಾಯ:—ಯಾವ ಪತಿಯು ನನ್ನಂತೆ ಕೇವಲ ಹೆಂಡತಿಯ ಆಲೋಚನೆಯಿಂದಲೇ ನಡೆಯತೊಡಗುವನೊ, ಅವನು ಒಂದಿಲ್ಲೊಂದು ದಿನ ಈಗಳಿನ ನನ್ನ ಸ್ಥಿತಿಯಂತೆ ಪೇಚಿಗೆ ಒಳಗಾಗುವದು ನಿಶ್ಚಿತವಾದದ್ದು! ಈ ನಾರೀ ಮಣಿಯ ಮಾತ ಕೇಳಿ ನಾನಒಮ್ಮೆಲೆ ಸತ್ತು ಹೋದಂತೆ ನಟಿಸಿದ್ದು ಒಳಿತಾಗಲಿಲ್ಲ! ಆಗ ನನಗೆ ಅನ್ಯವಿಚಾರಕ್ಕೆ ಅವಕಾಶವೇ ಇರಲಿಲ್ಲ; ಯಾಕಂದರೆ ಸಾವುಕಾರರ ಉಪದ್ರವವನ್ನು ತಡೆಯಲಾರದೆ ಜೀವಕ್ಕೆ ಬೇಸತ್ತು ಹೋಗಿದ್ದೆನು; ನಿಜವಾಗಿಯೆ ಸತ್ತು ಹೋಗುವ ಸಂಕಲ್ಪದಲ್ಲಿದ್ದೆನು ಇಷ್ಟರಲ್ಲಿಯೆ ಇವಳು **ಮೋಜಿನ ಮರಣವನ್ನು** ಸೂಚಿಸಿದ್ದರಿಂದ ನಾನದನ್ನು ಹಿಂದು ಮುಂದೆ ವಿಚಾರ ಮಾಡದೆ ಒಮ್ಮೆಲೆ ಅನುಮೋದಿಸಿದೆನು ಆಗಲಿ 'ಗತಂ ನ ಶೋಚೆಯೇತ್' ಎಂದು ಶಾಸ್ತ್ರಕಾರರು ಹೇಳಿದ್ದಾರೆ ಬಂದುದನ್ನು ಅನುಭವಿಸಲಿಕ್ಕೆ ಸಿದ್ಧನಾಗಿ ಮುಂದೆ ಸಾಗುವೆನು (ಮೆಲ್ಲ ಮೆಲ್ಲನೆ ಹೋಗುವನು)

---

## ೩ನೆಯ ಪ್ರವೇಶ.

[ತಾರೆಯು ಚನ್ನನೊಡನೆ ಪ್ರವೇಶಿಸುವಳು, ಹಿಂದೆ ಕಮಲೆಯು ಬರುತ್ತಿರುವಳು]

ತಾರೆ:—ನೀನು ಲಕ್ಷ ರೂಪಾಯಿಗಳ ಆಶೆಯಿಂದ ಗುಂಡೇರಾಯನಾಗಿ ಇಲ್ಲಿಗೆ ಬಂದೆ. ಅನುಪೇಕ್ಷಿತ ರೀತಿಯಿಂದ ಸ್ತ್ರೀರತ್ನವನ್ನು ಹೊಂದಿದೆ. ವಿಲಾಸದಲ್ಲಿ ಕಾಲಕಳೆಯುತ್ತಿರುವೆ. ನಿನಗೆ ಏತರ ಚಿಂತೆಯೂ ಇರಲಿಕ್ಕಿಲ್ಲ; ಆದರೆ ನನ್ನ ಮೇಲೆ ದೊಡ್ಡ ಜವಾಬ್ದಾರಿಯುಂಟು ನಾನು ಬಹಳ ರೀತಿಗಳಿಂದ

ಆಲೋಚಿಸಬೇಕಾಗಿದೆ. ಈಗ ನನಗೆ ನೀನು ನಿಜವಾದ ಗುಂಡೇರಾಯನು ಅಹುದೋ-ಅಲ್ಲವೊ ಎಂಬ ಸಂದೇಹವುಂಟಾಗಿದೆ. ನೀನು ನನ್ನ ಈ ಸಂದೇಹ ವನ್ನು ಹೋಗಲಾಡಿಸಲಿಕ್ಕೆ ಬೇಕು!

ಚನ್ನ:--ಇದರರ್ಥವೇನು? ಅತ್ತಿಗೆ, ನಿನ್ನ ಸಂದೇಹವನ್ನು ನಾನು ಹೇಗೆ ಹೋಗಲಾಡಿಸಲಿ? ತಾರೆ:—ನಿಮ್ಮ ತಂದೆಯ ಹೆಸರೇನು?

ಚನ್ನ:—ಯಾವ ತಂದೆಯ ಹೆಸರನ್ನು ಹೇಳಲಿ?

ತಾರೆ:—ಯಾವ ತಂದೆಯೆಂದರೆ?

ಚನ್ನ:—ಅತ್ತಿಗೆ, ಶಾಸ್ತ್ರಕಾರರು ಹಲವರು ತಂದೆಗಳನ್ನು ಸೃಷ್ಟಿಸಿ ದ್ದಾರೆ. ಅನ್ನದಾತನು, ಭಯತ್ರಾತನು, ಯಸ್ಯ ಕನ್ಯಾವಿವಾಹಿತಾ........ ಇತ್ಯಾದಿ. ಇವರೆಲ್ಲರು ತಂದೆಗಳ ಮಾಲಿಕೆಯಲ್ಲಿ ಸೇರಿರುವರು. ನನ್ನ ಅನ್ನದಾತನು ಖಾನಾವಳಿಯ ಕೃಷ್ಣಪ್ಪನು; ಯಾಕೆಂದರೆ, ನಾನು ಅವನ ಖಾನಾವಳಿಯಲ್ಲಿಯೆ ಬಹು ದಿವಸ ಊಟ ಮಾಡಿದ್ದೇನೆ. ಇವನೊಬ್ಬ ನನ್ನ ತಂದೆಯಾದನಷ್ಟೆ? ನಾನು ಹಲವು ಪೋಲೀಸ ಕೇಸುಗಳಲ್ಲಿ ಅಪರಾಧಿ ಯಾಗಿದ್ದೆನು. ಈ ಎಲ್ಲ ಪ್ರಸಂಗಗಳಲ್ಲಿ ನನ್ನನ್ನು ತುರಂಗವಾಸದ ಭಯ ದಿಂದ ರಕ್ಷಿಸಿದವನು ಇಲ್ಲಿಯ ಹೆಸರಾದ ವಕೀಲ ರಾವಬಹದ್ದೂರ ಗಳಿಗಿ. ಆದುದರಿಂದ ಇವನೊಬ್ಬ ನನ್ನ ತಂದೆಯು! ಇನ್ನು ಯಸ್ಯ ಕನ್ಯಾ ವಿವಾ ಹಿತಾ....ಆ ಕನ್ಯೆಯೇ ಇಲ್ಲಿ ಮೂರ್ತಿಮಂತಾಗಿ ನಿಂತಿದ್ದಾಳೆ. ಇವಳನ್ನು ವಿಚಾರಿಸಿಕೊಳ್ಳು, ಹೇಳುವಳು.

ತಾರೆ:—ಅವಳು ಹೇಳುವುದು ಬೇಡ! ನೀನೇ ಹೇಳಿಬಿಡು! ತಂಗೀ ನೀನು ಈ ವಿಷಯದಲ್ಲಿ ಇವನಿಗೆ ಸಹಾಯಕಳಾಗಬೇಡ!

ಕಮಲೆ—ನಾನು ನನ್ನ ಪತಿಗಳಿಗೆ ಸಹಾಯ ಮಾಡಬೇಡವೆ? ಅಕ್ಕಾ, ಎಂಥ ಮಾತಾಡುತ್ತಿರುವೆ? ನೀನು ಆರ್ಯರಮಣಿಯಲ್ಲವೆ? ಪತಿರಾಜರು ಪೇಚಾಡುತ್ತಿರುವಾಗ, ಅವರಿಗೆ ಸಹಾಯ ಮಾಡುವುದು ನನ್ನ ಕೈಯಲ್ಲಿರು ವಾಗ ನಾನು ಸುಮ್ಮನಿದ್ದೇನೆ? ಪ್ರಾಣನಾಥ, ನೀವು ಸುಮ್ಮನಿರ್ರಿ. ಇವಳ ಪ್ರಶ್ನೆಗೆ ಉತ್ತರವನ್ನೇ ಕೊಡಬೇಡಿರಿ! ಅಕ್ಕಾ, ನಾನು ಇವರು ನನ್ನ ಪತಿ ದೇವರೆಂದು ನಿರ್ಧಾರದಿಂದ ಹೇಳುತ್ತಿರಲು, ನಿನಗೆ ವಿಶ್ವಾಸವಾಗದೆ? ಒಳ್ಳೇ

ವಿಚಿತ್ರ ಸ್ವಭಾವದ ಹೆಂಗಸು! ಪತಿಯನ್ನು ಗುರತಿಸುವ ಅಧಿಕಾರವು ಉಳಿದೆಲ್ಲರಿಗಿಂತ ಸತಿಗೆ ಹೆಚ್ಚಾಗಿರುವುದು ಸ್ವಾಭಾವಿಕವಲ್ಲವೆ?

ಚನ್ನ:—ಅತ್ತಿಗೆ, ಇನ್ನೂ ನಿನಗೆ ಸಂಶಯವಿದೆಯೆ? ಸಾಕ್ಷಿ-ಪುರಾವೆಗಳು ಬೇಕೆ? ನನ್ನ ಈ ಪ್ರಿಯತಮೆಯು ಎಲ್ಲಕ್ಕೂ ಹೆಚ್ಚಿನ ಸಾಕ್ಷಿದಾರಳಲ್ಲವೇನು? ಇವಳ ಸಾಕ್ಷಿಯನ್ನು ನಂಬದೆ, ಇವಳ ತಂದೆಯನ್ನಾಗಲಿ, ನನ್ನ ತಂದೆಯನ್ನಾಗಲಿ ಸಾಕ್ಷಿಗೆ ಕರಕೊಂಡು ಬರಬೇಕೆಂದು ಹೇಳುವೆಯಾ? ಆ ಮಹಾಶಯರು ದುರ್ಮಾರ್ಗಣಕ್ಕೊಳಗಾಗಿ ನರಕವಾಸದ ಸೌಖ್ಯವನ್ನನುಭವಿಸುತ್ತಿರಲು, ಅವರನ್ನು ಆ ಆನಂದದಿಂದ ವಂಚಿಸಿ ಇಲ್ಲಿಗೆ ಕರೆತರುವುದು ಹೇಗೆ?

ತಾರೆ:—ನಾನು ಇನ್ನೊಂದು ಪ್ರಶ್ನೆಯ ಕೇಳುತ್ತೇನೆ. ಇದಕ್ಕಾದರೂ ಸರಿಯಾಗಿ ಉತ್ತರ ಕೊಡು. ನಿಮ್ಮಿಬ್ಬರ ವಿವಾಹವು ಎಂದು, ಯಾವ ಸ್ಥಳದಲ್ಲಾಯಿತು?

ಕಮಲೆ:—ಪ್ರಾಣನಾಥ, ನೀವು ಈ ಪ್ರಶ್ನೆಗೆ ಉತ್ತರ ಕೊಡಬೇಡಿರಿ; ಯಾಕೆಂದರೆ, ಇವಳ ಈ ಪ್ರಶ್ನೆಯು ನಮ್ಮಿಬ್ಬರ ದಿವ್ಯ ಪ್ರೇಮದ ಅಪಮಾನ ಮಾಡತಕ್ಕದ್ದಾಗಿದೆ!

ಚನ್ನ:—ಪ್ರಿಯೆ, ನೀನು ಸುಮ್ಮನಿರು. ಅತ್ತಿಗೆಯು ಪ್ರಶ್ನೆಗಳನ್ನು ಕೇಳಿ ಸಂತುಷ್ಟಳಾಗುವಂತಿದ್ದರೆ, ನಾವು ಇವಳ ಮನಸ್ಸನ್ನೇಕೆ ನೋಯಿಸಬೇಕು? ಸತ್ಯಕ್ಕೆ ಸಾವಿಲ್ಲ ನಾವು ನಿಜರೂಪಿಗಳಾಗಿರುವಾಗ ಇವಳ ಅಡ್ಡತಿಡ್ಡ ಪ್ರಶ್ನೆಗಳಿಗೆ ಭಯಗೊಳ್ಳುವ ಕಾರಣವಿಲ್ಲ. ಇವಳು ಯಾವ ಬುದ್ಧಿಯಿಂದ ಯಾವ ತೆರದಿಂದ ಪ್ರಶ್ನೆ ಕೇಳುವಳೋ, ಅದೇ ಬುದ್ಧಿಯಿಂದ ಅದೇ ರೀತಿಯಿಂದ ಉತ್ತರಗೊಡುತ್ತ ಹೋದರಾಯಿತು! ಅತ್ತಿಗೆ, ಯೋಚಿಸಿ ನೋಡು. ಇಂದು-ನಿನ್ನೆ ನಮ್ಮ ಲಗ್ನವಾಗಿದೆಯೆ? ಲಗ್ನವಾಗಿ ಎಷ್ಟೋ ವರ್ಷಗಳು ಕಳೆದು ಹೋದವು. ಈ ಅವಧಿಯಲ್ಲಿ ನಾನು ಒಮ್ಮೆ ಲಗ್ನವನ್ನೇ ಮರೆದು ಹೋಗಿದ್ದೆನು. ಇಂತಹ ಸ್ಥಿತಿಯಲ್ಲಿರುವ ನನಗೆ ಲಗ್ನದ ತಾರೀಖು, ತಿಂಗಳು, ಇಸವಿ ಮುಂತಾದವು ನೆನಪಿರುವ ಸಂಭವವಿದೆಯೆ?

ತಾರೆ?—ಯಾಕೆ ನೆನಪಿರಕೂಡದು? ನಾನು ನನ್ನ ಲಗ್ನದಲ್ಲಿ ನಡೆದ ಸಣ್ಣಪುಟ್ಟ ಸಂಗತಿಗಳನ್ನು ಸಹ ಈಗಲೂ ಹೇಳಬಲ್ಲೆನು!

ಚನ್ನ:—ಇದರಲ್ಲಿ ಆಶ್ಚರ್ಯವೇನು? ಅತ್ತಿಗೆ, ಹೆಂಗಸರೂ ಗಂಡಸರೂ ಭಿನ್ನ ಭಿನ್ನ ಪ್ರಕೃತಿಯವರೂ, ಸ್ವಭಾವದವರೂ ಆಗಿರುವರೆಂಬದನ್ನು ನೀನು ಒಪ್ಪುವಿಯಷ್ಟೇ? ಹೆಂಗಸರು ಮಾಡುವ ಉದ್ಯೋಗ ಬೇರೆ, ಗಂಡಸರು ಮಾಡುವ ಹೋರೆ ಬೇರೆ. ನಾವು ರುಮಾಲವನ್ನು ಸುತ್ತಿಕೊಳ್ಳುವೆವು. ಕೋಟು-ಶರ್ಟುಗಳನ್ನು ಧರಿಸುವೆವು; ಆದರೆ ನೀವು ರುಮಾಲವನ್ನು ಸುತ್ತಿಕೊಳ್ಳಲಾರಿರಿ. ಕೋಟು-ಶರ್ಟುಗಳನ್ನು ಹಾಕಿಕೊಳ್ಳಲಾರಿರಿ. ಇದರಂತೆಯೆ ನಾವು ನಿಮ್ಮಂತೆ ಸೀರೆ-ಕುಪ್ಪಸಗಳನ್ನು ಧರಿಸಲಾರೆವು. ಅತ್ತಿಗೆ, ನೀನು ಬುದ್ಧಿ ಹೀನಳಲ್ಲ. ನಿನಗೆ ಈ ವಿಷಯದಲ್ಲಿ ಇದಕ್ಕೂ ಹೆಚ್ಚಿಗೆ ಹೇಳಲಾರೆನು. ನಿನಗೆ ನನ್ನ ಲಗ್ನದ ಮಾಹಿತಿಯ ಅವಶ್ಯಕತೆಯೇ ಇದ್ದರೆ, ನನ್ನ ಈ ಪ್ರಿಯತಮೆಯನ್ನು ಪ್ರಶ್ನ ಮಾಡು. ಇವಳೂ ನಿನ್ನಂತೆಯೆ ಈನ್ನ ಲಗ್ನದ ವಿವರಣೆಯನ್ನು ಪಠಿಸಬಲ್ಲಳು!

ಕಮಲೆ:—ಅಕ್ಕಾ, ಇದೇನು ಗೊಂದಲವೆಬ್ಬಿಸಿರುವೆ? ಬೇಡ, ಪ್ರಶ್ನೆಗಳ ಮಾಲಿಕೆಯನ್ನು ಕೇಳಬಯಿಸಬೇಡ. ನಾನು ಹೇಳುತ್ತಿರುವ ಇವರೇ ನನ್ನ ಪ್ರಿಯತಮರೆಂಬ ಮಾತಿನಲ್ಲಿ ವಿಶ್ವಾಸವಿಟ್ಟು. ನಿಶ್ಚಿಂತಳಾಗು.

ತಾರೆ:--ನಿನ್ನ ಮಾತಿನಲ್ಲಿ ಹೇಗೆ ವಿಶ್ವಾಸವಿಡಲಿ? ಈ ಮೊದಲು ನೀನು ಒಬ್ಬನನ್ನು ಕಂಡು ಅವನೇ ನನ್ನ ಪ್ರಿಯತಮನೆಂದು ನಿರ್ಧಾರದಿಂದ ಹೇಳಿದೆ. ಈಗ ಇವನನ್ನು ನೋಡಿ, ಇವನೇ ನನ್ನ ಪ್ರಿಯತಮನೆಂದು ಗಟ್ಟಿಯಾಗಿ ಹೇಳುತ್ತಿರುವೆ. ಇವನು ಇಂದು ಓಡಿ ಹೋಗಲಾಗಿ ನಾಳೆ ಮತ್ತೊಬ್ಬನು ಬಂದರೆ, ಅವನೇ ನನ್ನ ಪ್ರಿಯತಮನೆಂದು ಉಚ್ಚರಿಸಲಿಕ್ಕೆ ನೀನು ಸಂಕೋಚಗೊಳ್ಳಲಾರೆ! ಬಹು ಪತಿವ್ರತೆಯು ನೀನು!

ಕಮಲೆ:—ಹೀಗೆ ಮಾತಾಡಿ ನನ್ನ ಅವಮಾನಗೊಳಿಸಲಿಕ್ಕೆ ಯತ್ನಿಸುವುದರಲ್ಲಿ ನಿನ್ನ ಉದ್ದೇಶವೇನು?

ತಾರೆ:—ನಾನು ನಿನ್ನ ಅವಮಾನಗೊಳಿಸಲಿಕ್ಕೆ ಯತ್ನಿಸುವದಿಲ್ಲ; ಆದರೆ ನೀನು ಮಾತ್ರ ನಿನ್ನ ಮರ್ಯಾದೆಗೆ ಕುಂದು ಬರುವಂತೆ ವರ್ತಿಸುತ್ತಿರುವೆ!

ಕಮಲೆ:—ಅಕ್ಕಾ, ನಿನಗೆ ನನ್ನ ಮನೋವ್ಯಥೆಯು ಹೇಗೆ ತಿಳಿಯಬೇಕು? ನಾನು ಪತಿವಿರಹದಲ್ಲಿ ದೀರ್ಘಕಾಲವನ್ನು ಅತಿಕ್ರಮಿಸಿದವಳು!

ಪ್ರೇಮೋನ್ಮಾದಿನಿಯು!

ತಾರೆ:-ಆದರೇನಾಯಿತು? ಕಂಡಕಂಡವರನ್ನು ಪತಿಯೆಂದು ಸಂಬೋಧಿಸಬೇಕೆ? ತಂಗೀ, ಬಹಳ ಹೇಳಲಾರೆ. ನೀನು ನಿನ್ನೀ ವರ್ತನವನ್ನು ತಿದ್ದಿಕೋ.

ಕಮಲೆ:—ಅಕ್ಕಾ, ಕೆಟ್ಟಿದ್ದರೆ ತಾನೇ ಸುಧಾರಿಸಿಕೊಳ್ಳಬೇಕಷ್ಟೆ? ಎಂದೆಂದಿಗೂ ಒಂದೇ ವಿಧವಾಗಿರುವಾಗ ಸುಧಾರಿಸುವದೇನು?

ತಾರೆ:—ಏನೇ ಇರಲಿ. ನಿಮ್ಮ ಮೂವರ ವಿಷಯದಲ್ಲೂ ನನಗೆ ಬಲವಾದ ಸಂದೇಹವುಂಟಾಗಿದೆ! ಕೇವಲ ಸಂದೇಹವೇ ಏಕೆ, ನೀವು ಮೋಸಗಾರರಿರಬೇಕೆಂದು ನನ್ನ ಮನವರಿಕೆಯಾಗಿದೆ!

ಚನ್ನ (ಗಾಬರಿಯಾಗಿ):—ಏತರಿಂದ? ಅತ್ತಿಗೆ, ನಾವು ಮೋಸಗಾರರೆಂದು ನೀನು ಹೇಗೆ ಅನ್ನುತ್ತಿರುವೆ?

ತಾರೆ:—ನಿಮ್ಮ ಆಡಂಬರದ ಮಾತುಗಳಿಂದ! ವಿಚಿತ್ರ ವರ್ತನದಿಂದ! ನೀವು ನನ್ನ ಸಂದೇಹವನ್ನು ಹೋಗಲಾಡಿಸಬೇಕಾದರೆ, ವಿಶ್ವಾಸಾರ್ಹಗಳಾದ ಪ್ರಮಾಣಗಳನ್ನು ತೋರಲಿಕ್ಕೆ ಬೇಕು!

ಚನ್ನ:—ವಿಶ್ವಾಸವಿಡತಕ್ಕ ಪ್ರಮಾಣಗಳೆ? ಅವನ್ನೆಲ್ಲಿಂದ ತರಲಿ?

ಕಮಲೆ:—ಅಕ್ಕಾ, ನಿನ್ನ ಈ ಮಾತುಗಳನ್ನು ನಾನು ಸಹಿಸಲಾರೆನು! ನಿನ್ನ ಒಂದೊಂದೇ ಮಾತು ನನ್ನ ಎದೆಗೆ ತಾಗಿ, ಮರ್ಮಯಾತನೆಯನ್ನುಂಟು ಮಾಡುತ್ತಿದೆ! ಅಕ್ಕನಿಂದ ಆಗುತ್ತಿದ್ದ ಈ ಅಸಹ್ಯ ಅಪಮಾನವನ್ನು ನಾನು ಹೇಗೆ ಸಹಿಸಲಿ? (ವಿಧವೆಯು ಬರುವಳು)

ವಿಧವೆ:—ಅಪ್ಪಾ, ಗುಂಡೇರಾಯ. ನೀನೆಲ್ಲಿರುವೆ? ನಿನ್ನನ್ನು ಹುಡುಕಹತ್ತಿ ಒಂದು ತಾಸಾಯಿತು. (ಗುಂಡೇರಾಯನ ಹತ್ತಿರ ಹೋಗಿ ಕೈ ಹಿಡಿದು) ಬಾ, ನಿನಗಾಗಿ ಮಸಾಲೆಯ ಹಾಲು ಮರಳಿಸಿಟ್ಟು ಬಂದಿರುವೆನು.

(ವಸ್ತ್ರಾವೃತನಾದ ಬಂಡೇರಾಯನು ಬರುವನು.)

ಬಂಡೇರಾಯ ;—ಇದೋ, ನಾನು ಬಂದಿರುವೆನು.

ತಾರೆ:—ಅಯ್ಯೋ! ಇವರಾರು?

ವಿಧವೆ:—ಅಪ್ಪಾ, ಗುಂಡೇರಾಯ, ನನಗೆ ಬಹಳ ಭಯವುಂಟಾಗಿರುವದು!

ಚನ್ನ:—ಯಾರು ನೀನು? ಇಲ್ಲಿಗೇಕೆ ಬಂದಿರುವೆ? ಪಿಶಾಚಿಯಂತೆ ತೋರುವೆ!

ಬಂಡೇರಾಯ:—ನಾನು ಬಂಡೇರಾಯ! ಬಹಳ ಹಸಿದಿದ್ದೇನೆ. ನೀ-ವಾರು? ಇಲ್ಲಿಗೇಕೆ ಬಂದಿರುವಿರಿ? ನಾನು ನಿಮ್ಮೆಲ್ಲರನ್ನೂ ತಿನ್ನುವೆನು!!

ವಿಧವೆ (ಗದಗದನೆ ನಡುಗುತ್ತ):—ಅಪ್ಪಾ ಬಂಡೇರಾಯ, ನನ್ನನ್ನು ತಿನ್ನಬೇಡ! ನಾನು ನಿನ್ನ ಸೋಂದರತ್ತೆಯು!

ಬಂಡೇರಾಯ:—ಸೋದರತ್ತೆಯೆ? ನಿನ್ನದು ಒಳ್ಳೇ ಸುಖದಿಂದ ಬೆಳೆದ ದೇಹ! ರುಚಿಕರವಾದ ಮಾಂಸ! ಮೊದಲು ನಿನ್ನನ್ನೇ ತಿನ್ನುವೆನು!!

ವಿಧವೆ (ಬತ್ತಿಷ್ಟು ನಡುಗುತ್ತ):—ಬೇಡವಪ್ಪಾ ಬೇಡ! ನಾನು ನಿನ್ನ ಕಾಲ ಮೇಲೆ ಬೀಳುವೆನು; ಸೆರಗೊಡ್ಡಿ ಬೇಡುವೆನು; ಈ ಬಡ ಸೋದರತ್ತೆಯ ಮೇಲೆ ದಯೆದೋರು!

ಬಂಡೇರಾಯ:—ಬಹು ದಿನಗಳಿಂದ ಉಪವಾಸವಿರುವೆನು! ಹೊಟ್ಟೆ ಹಸಿದು ಹೋಗಿದೆ! ಈ ಹೊತ್ತಿನಲ್ಲಿ ಯಾರ ಮೇಲೂ ದಯೆದೋರಲಾರೆನು!

ವಿಧವೆ:—ಅಯ್ಯೋ ಏನ ಮಾಡಲಿ? ಈ ಪಿಶಾಚಿಯ ಕೈಯಿಂದ ಹೇಗೆ ಪಾರಾಗಲಿ? ಗುಂಡೇರಾಯ, ನೀನಾದರೂ ನನ್ನನ್ನು ಸಂರಕ್ಷಿಸು. ನಾನು ಈ ಭೂತದ ಆಹಾರವಾಗಿ ಸಾಯುಲಾರೆನು!

ಬಂಡೇರಾಯ:—ಈ ಹೊತ್ತಿನಲ್ಲಿ ನಿನ್ನನ್ನು ಯಾರೂ ರಕ್ಷಿಸಲಾರರು! ನೀನು ಏನು ಮಾಡಿದರೂ ನನ್ನ ಕೈಯಿಂದ ಪಾರಾಗಲಾರೆ. ಎಲ್ಲಿರುವೆ? ಇದೋ ಬಂದೆನು! ಓಡಿ ಹೋಗಬೇಡ!

ವಿಧವೆ (ತಾರೆಯ ಹತ್ತಿರ ಬಂದು):—ಮಗಳೆ, ನೀನಾದರೂ ನನ್ನ ಜೀವವನ್ನುಳಿಸು. ನಾನು ಇನ್ನು ಈ ಮನೆಯಲ್ಲಿರುವದಿಲ್ಲ. ನಾಳೆ ಬೆಳಗಾಗುತ್ತಲೆ ಸದ್ದಿಲ್ಲದೆ ಹೋಗಿಬಿಡುವೆನು!

ತಾರೆ:—ನಿಜವೆ?

ವಿಧವೆ:—ನನ್ನಾಣೆಯಾಗಿಯೂ ಹೋಗಿ ಬಿಡುವೆನು.

ತಾರೆ:—ಹಾಗಾದರೆ ಈಗಲೆ ಓಡಿ ಹೋಗು. ನಾನು ನಿನ್ನನ್ನು ಪಾರ ಮಾಡುವೆನು.

ವಿಧವೆ:—ಪಿಶಾಚಿಯ ಮುಂದೆ ಹೇಗೆ ಹಾಯ್ದು ಹೋಗಲಿ? ನನಗೆ ಭಯವಾಗುತ್ತಿದೆ!

ತಾರೆ:—ನಾನು ಪಿಶಾಚಿಯನ್ನು ಅಡ್ಡಗಟ್ಟಿಕೊಂಡು ನಿಲ್ಲುವೆನು. ನೀನು ರಾಮನಾಮವನ್ನು ಜಪಿಸುತ್ತ ಓಡಿ ಹೋಗಿಬಿಡು!

(ತಾರೆಯು ಬಂಡೇರಾಯನ ಮುಂದೆ ಹೋಗಿ ನಿಲ್ಲುವಳು. ವಿಧವೆಯು ಓಡುವಳು.)

ಬಂಡೇರಾಯ:(ಚನ್ನನ ಹತ್ತಿರ ಬಂದು):-ಇನ್ನು ಬಂತು ನಿನ್ನ ಸರತಿಯು! ನೀನಾರು? ಚನ್ನ:—ನಾನು ಗುಂಡೇರಾಯ.

ಬಂಡೇರಾಯ:--ಸುಳ್ಳಾಡುವೆಯಾ? ನೀನು ಗುಂಡೇರಾಯನೆಂಬುದಕ್ಕೆ ಆಧಾರವೇನು?

ಚನ್ನ:—ಈ ನನ್ನ ಪ್ರಿಯತಮೆಯೂ, ಓಡಿ ಹೋದ ಆ ನನ್ನ ಸೋದರತ್ತೆಯೂ ನಾನು ಗುಂಡೇರಾಯನೆಂಬದಕ್ಕೆ ಸಾಕ್ಷಿಗಳಾಗಿದ್ದಾರೆ

ಬಂಡೇರಾಯ:—ನಿನ್ನ ಸಾಕ್ಷಿಗಳು ಸುಳ್ಳಾಡುತ್ತಿದ್ದಾರೆ. ನೀನು ನಿಜವಾಗಿಯೂ ಮೋಸಗಾರನೆಂದು ನಾನು ಸ್ಪಷ್ಟವಾಗಿ ಹೇಳುತ್ತೇನೆ.

ಚನ್ನ:—ನಿನ್ನಂತೆಯೆ ನಾನೂ ಸ್ಪಷ್ಟವಾಗಿ ಹೇಳಬಯಿಸುವೆನು; ನೀನೂ ನಿಜವಾದ ಪಿಶಾಚಿಯಲ್ಲ! (ಮೈ ಮೇಲಿನ ವಸ್ತ್ರವನ್ನು ತೆಗದು ಚೆಲ್ಲುವನು)

ಬಂಡೇರಾಯ:--ನಾನಾರೆಂಬದು ನಿನಗೆ ಗೊತ್ತಾಯಿತೇ? ಇನ್ನು ನೀನು ಇಲ್ಲಿರಬೇಡ!

ಚನ್ನ:—ಹೇಗೆ ಹೋಗಲಿಕ್ಕಾಗುವುದು? ದೊರೆಯಬಹುದಿದ್ದ ಲಕ್ಷ ರೂಪಾಯಿಗಳ ಮೋಹವನ್ನು ತ್ಯಜಿಸುವದು ನನ್ನಿಂದಾಗದು.

ಬಂಡೇರಾಯ:—ಹೀಗಿದ್ದರೆ, ನಾನೂ ನೀನೂ ಒಪ್ಪಂದ ಮಾಡಿಕೊಳ್ಳೋಣ. ನನಗರ್ಧ, ನಿನಗರ್ಧವಾಗಲಿ. ನೀನಿದಕ್ಕೆ ಸಮ್ಮತಿಸುವಿಯಾ?

ಚನ್ನ:—ಒಪ್ಪಲಿಕ್ಕೆ ಅಡ್ಡಿಯಿಲ್ಲ; ಆದರೆ ಸತ್ತಿರುವನೆಂದು ಸಿದ್ಧವಾದ ಮನುಷ್ಯನ ಸಂಗಡ ಒಪ್ಪಂದ ಮಾಡಿಕೊಳ್ಳುವುದು ಹೇಗೆ?

ಬಂಡೇರಾಯ:--ಇದಕ್ಕೆ ನೀನು ಚಿಂತಿಸದಿರು! ನಾನು ಹೇಗೆ ಒಮ್ಮಿಂದೊಮ್ಮೆಲೆ ಸತ್ತು ಹೋದೆನೋ, ಹಾಗೆಯೆ ಒಮ್ಮಿಂದೊಮ್ಮೆಲೆ ಬದುಕಿ ಬರಬಲ್ಲೆನು!

ಚನ್ನ:—ಜನರು ನಂಬುವದು ಹೇಗೆ? ನೀನು ತುಂಗಭದ್ರೆಯಲ್ಲಿ ಜಲ ಸಮಾಧಿಯನ್ನು ಹೊಂದಿರುವೆ! ಶ್ರಾದ್ಧಾದಿಗಳನ್ನು ಮಾಡಿಸಿಕೊಂಡಿರುವೆ!

ಬಂಡೇರಾಯ:—ನಿನಗದರ ಚಿಂತೆ ಬೇಡ. ಮತ್ತೊಂದು ಮಾತೆಂದರೆ, ನಾನು ನಿಜವಾಗಿ ಸತ್ತ ಹೊರತು, ನಿನಗೆ ಆ ಲಕ್ಷ ರೂಪಾಯಿಗಳು ದೊರೆಯುವಂತಿಲ್ಲ. ಮೇಲಾಗಿ ನಾವಿಬ್ಬರೂ ಸತ್ತರೆ, ಆ ರೂಪಾಯಿಗಳು ನನ್ನ ಹೆಂಡತಿಗೇ ದೊರೆಯುವವು. ಕಾರಣ ಪ್ರಸಂಗ ವಿಶೇಷದಲ್ಲಿ ನೀನೂ ನನ್ನಂತೆಯೆ ಒಮ್ಮೆ ಮೋಜಿನ ಮರಣವನ್ನನುಭವಿಸುವ ಪ್ರಸಂಗ ಬಂದರೂ ಬರಬಹುದು. ಹೀಗಾದರೆ, ಮುಂದೆ ನನ್ನ ಹೆಂಡತಿಯು ಕಡೆಯಿಂದ ನಿನಗೆ ಐವತ್ತು ಸಾವಿರ ರೂಪಾಯಿಗಳನ್ನು ಕೊಡಿಸುವೆನೆಂಬದನ್ನು ಮರೆಯದಿರು.

ಚನ್ನ:—ನಾನು ನಿನ್ನ ಈ ಮಾತಿಗೆ ಸಮ್ಮತಿಸುವೆನು.

ಬಂಡೇರಾಯ:—ಈ ಕಾಗದದ ಮೇಲೆ ಸಹಿ ಮಾಡು.

ಚನ್ನ:—ಈ ಬಿಳಿಯ ಕಾಗದದ ಮೇಲೆ ಸಹಿ ಮಾಡಲಿಯಾ? ಬಿಕ್ಕಟ್ಟಿನ ಹೋರಿಯಿತು!

ಬಂಡೇ:—ಒಲ್ಲೆನೆಂದರೆ ಕೇಳುವವನು ನಾನಲ್ಲ! (ಮುಷ್ಟಿಯನ್ನೆತ್ತುವನು)

ಚನ್ನ:—ಆಗಲಿ. ಸಹಿ ಮಾಡುವೆನು. (ಮಾಡುವನು)

(ಪರಿಚಾರಿಕೆ ಬರುವಳು.)

ಪರಿಚಾರಿಕೆ:—ಅಮ್ಮನವರೇ, ಪೋಸ್ಟಮನ್ನನು ಸಾಯಂಕಾಲದಲ್ಲಿಯೇ ಈ ಪತ್ರವನ್ನು ಕೊಟ್ಟು ಹೋಗಿದ್ದನು. ನಾನು ಮರೆತಿದ್ದೆನು. ಇಗೋ, ತಕ್ಕೊಳ್ಳಿರಿ.

(ಬಂಡೇರಾಯನನ್ನು ನೋಡಿ ಭಯಗೊಂಡು ಪತ್ರವನ್ನು ಚಲ್ಲಿಕೊಟ್ಟು ಓಡಿ ಹೋಗುವಳು.)

ಬಂಡೇ:—ಪ್ರಿಯೆ, ಪೋಸ್ಟಕಾರ್ಡದ; ತಕ್ಕೊಂಡು ಓದು.

ತಾರೆ (ಪತ್ರವನ್ನು ತಕ್ಕೊಂಡು ಚನ್ನನ ಮೋರೆಯ ಕಡೆಗೆ ದಿಟ್ಟಿಸಿ ನೋಡುವಳು):—ಪ್ರಿಯತಮ, ಓದುವೆನು ಕೇಳಿರಿ (ಓದುವಳು) “ಅಣ್ಣನ ಮರಣದಿಂದ ಅತಿಶಯ ದುಃಖವಾಯಿತು. ಭಗವದಿಚ್ಛೆಗೆ ಉಪಾಯವಿಲ್ಲ. ನಾನು ಇಂದೇ ಹೊರಟು ಸೋಮವಾರ ಮುಂಜಾವಿನಲ್ಲಿ ಅಲ್ಲಿಗೆ ಬರುವೆನು. ಇತಿ-

ನಿನ್ನ ಮೈದುನ, ಗುಂಡೇರಾಯ ಬಾಯ್ಲುಗ್ಗಳ.”

ಬಂಡೇರಾಯ:—ಮತ್ತೊಬ್ಬ ಗುಂಡೇರಾಯನೆ? (ಚನ್ನನನ್ನು ನೋಡಿ) ಕೇಳಿದೆಯಾ?

ಚನ್ನ:—ಕೇಳಿದೆನು. ಈಗ ನನಗೆ ಏನು ಮಾಡೆಂದು ಹೇಳುವೆ?

ಬಂಡೇರಾಯ:—ಒಳ್ಳೆ ವಿಧೇಯನಾಗಿ ತೋರುವೆ! ನಾನು ಹೇಳಿದಂತೆ ಕೇಳುವೆಯಾ? ನಿಜವಾಗಿಯೂ ಹೇಳು. ನೀನು ಗುಂಡೇರಾಯನಲ್ಲವಷ್ಟೆ? ಚನ್ನ:—ಅಲ್ಲ.

ಬಂಡೇ:—ನಾನು ನಿನ್ನನ್ನು ಪೋಲೀಸರ ಸ್ವಾಧೀನ ಪಡಿಸುವೆನು.

ಚನ್ನ:—ಇದರಿಂದ ಪ್ರಯೋಜನವೇನು? ಮೇಲಾಗಿ ಜನರ ದೃಷ್ಟಿಯಿಂದ ಸತ್ತವನು ನೀನು! ನನ್ನನ್ನು ಕಚೇರಿಗೆ ಕರೆದೊಯ್ದು ನನ್ನ ಮೇಲೆ ಖಟ್ಲೆ ಹಾಕಿಸುವದು ನಿನ್ನಿಂದಾಗದು!

ಬಂಡೇರಾಯ:—ಹಾಗಾದರೆ, ಈಗ ನಾನೇನು ಮಾಡಲಿ? ನೀನೇ ಹೇಳಿ ಬಿಡು.

ಚನ್ನ:—ನನಗೆ ಅಪ್ಪಣೆ ಕೊಟ್ಟು ಬಿಡು. ನಾನು ಹೋಗುವೆನು.

ಬಂಡೇರಾಯ:—ಮುಂದೆ?

ಚನ್ನ:—ಇನ್ನು ಮತ್ತೊಬ್ಬ ಗುಂಡೇರಾಯನು ಬರುವನಷ್ಟೆ? ಅವನನ್ನು ಪರೀಕ್ಷಿಸು. ಅವನೂ ನನ್ನಂತೆಯೆ ಸುಳ್ಳು ಗುಂಡೇರಾಯನಾಗಿದ್ದರೆ ಹೊರದೂಡಿ, ನನಗೆ ಸುದ್ದಿಯನ್ನು ತಿಳುಹು. ನಾನು ನನ್ನ ಪಾಲಿನ ರೂಪಾಯಿಗಳನ್ನು ವಸೂಲ ಮಾಡಿಕೊಳ್ಳಲಿಕ್ಕೆ ಬರುವೆನು.

ಬಂಡೇರಾಯ:—ಇಲ್ಲದಿದ್ದರೆ?

ಚನ್ನ:—ಇದೇ ನನ್ನ-ನಿನ್ನ ಕೊನೆಯ ದರ್ಶನ. ನಾನು ಬೇರೆ ವಿಷಯದಲ್ಲಿ ಮನಸ್ಸು ಹಾಕುವೆನು. ದ್ರವ್ಯಾರ್ಜನೆಯ ಬೇರೊಂದು ಹೋರೆಯನ್ನವಲಂಬಿಸುವೆನು. ಈ ಪ್ರಸಂಗದಲ್ಲಿ ನಾನು ನಿಮಗೆ ಮತ್ತೊಂದು ಮಾತ ಹೇಳ ಬಯಸುವೆನು. ಬರುವವನು ಯಾವನೇ ಇರಲಿ, ಅವನು ಬಂದ ಕೂಡಲೆ ಈ ಪ್ರಿಯತಮೆಯನ್ನೂ ಆ ಸೋದರತ್ತೆಯನ್ನೂ ಛೂ ಬಿಟ್ಟರೆ ಸಾಕು; ಅವನು ಒಂದೆರಡು ದಿನಗಳಲ್ಲಿಯೆ ಆ ಲಕ್ಷ ರೂಪಾಯಿಗಳ ಮೋಹವನ್ನು ತ್ಯಜಿಸಿ, ದಿವಾಳಿದೆಗೆದು ಪಲಾಯನ ಮಾಡದಿರನು! ಕಚೇರಿ

ಯಲ್ಲಿಯ ಪೋಲೀಸರ ಉಪದ್ರವಕ್ಕಿಂತಲೂ ಈ ಸ್ತ್ರೀರತ್ನಗಳ ಪಿಡುಗು ಭಯಾನಕವಾದದ್ದು! ನಾನು ನಾಟಕದಲ್ಲಿ ಸೋಗು ಹಾಕಿ ಬಹು ದಿವಸ ಸರ್ವೀಸ ಮಾಡಿದವನಾದ್ದರಿಂದ, ಹೇಗಾದರೂ ಮಾಡಿ ಇವರ ಪಿಡುಗನ್ನು ಸಹಿಸಿಕೊಂಡೆನು! ಹೆರವರಿಗೆ ಇದು ಸಾಧ್ಯವಿಲ್ಲ! ಆಗಲಿ. ನಾನಿನ್ನು ಹೋಗಿ ಬರುವೆನು. ಅಪ್ಪಣೆ ಕೊಡಿರಿ. ನಮಸ್ಕಾರ. (ಹೋಗುವನು)

ತಾರೆ:—ಈ ಮನುಷ್ಯನು ವಂಚಕನೆಂದು ನಾನು ಮೊದಲೇ ಗೊತ್ತು ಮಾಡಿರಲಿಲ್ಲವೆ? ನನ್ನ ಆ ತರ್ಕವು ಈಗ ನಿಜವಾಯಿತಷ್ಟೆ?

ಬಂಡೇರಾಯ:—ಒಂದು ಪಿಡುಗು ಹೋಯಿತೆಂದು ಸಮಾಧಾನದ ಉಸಿರ್ಗರೆವಷ್ಟರಲ್ಲಿ ಮತ್ತೊಂದು ಪಿಡುಗು ಬರುವುದರಲ್ಲಿದೆ! ಈಗ ಆಗಮಿಸಿದ್ದ ಇಬ್ಬರು ಗುಂಡೇರಾಯರು ನಿಜ ಗುಂಡೇರಾಯರಾಗಿರದೆ, ವೇಷಗಾರರಾಗಿದ್ದರು. ಇನ್ನು ಬರುವವನು ನಿಜವಾಗಿಯೂ ಗುಂಡೇರಾಯನಾಗಿದ್ದರೆ?

ತಾರೆ:—ಬರುವ ಪಿಡುಗಿನ ಬಗ್ಗೆ ಈಗಲೆ ಆಲೋಚಿಸಿ ವ್ಯಸನಗೊಳ್ಳುವ ಕಾರಣವಿಲ್ಲ. ಬಂದನಂತರ ಯಾವುದೊಂದು ಹಂಚಿಕೆಯನ್ನು ಹುಡುಕೋಣವಂತೆ ಒಂದು ವೇಳೆ ಅವನು ನಿಜವಾದ ಗುಂಡೇರಾಯನೇ ಆಗಿದ್ದರೆ, ಅವನೊಡನೆ ಒಪ್ಪಂದ ಮಾಡಿಕೊಳ್ಳಿರಿ. ಆ ಲಕ್ಷ ರೂಪಾಯಿಗಳನ್ನು ಸರಿಯಾಗಿ ಹಂಚಿಕೊಳ್ಳಿರಿ.

ಬಂಡೇರಾಯ:—ಅವನು ಇದಕ್ಕೆ ಒಪ್ಪದಿದ್ದರೆ? ಜನರ ದೃಷ್ಟಿಯಿಂದ ನಾನು ಸತ್ತಿರುವೆನಲ್ಲವೆ? ಹೀಗೆ ಸತ್ತಿದ್ದ ಮನುಷ್ಯನಿಗೆ ಅವನು ತನ್ನ ಅರ್ಧ ಭಾಗವನ್ನು ಬಿಟ್ಟುಕೊಡಲಿಕ್ಕೆ ಯಾಕೆ ಸಮ್ಮತಿಸುವನು?

ತಾರೆ:—ಪ್ರಿಯತಮ, ಇದಕ್ಕಾಗಿ ನೀವು ಚಿಂತಿಸಬೇಡಿರಿ. ನಾನು ನಿಮಗೆ ಹೇಗೆ ಒಮ್ಮೆಲೆ ಮೋಜಿನ ಮರಣವನ್ನೊದಗಿಸಿದೆನೋ, ಹಾಗೆಯೇ ಅಕಸ್ಮಾತ್ತಾಗಿ ಪುನರ್ಜೀವನವನ್ನೂ ಕೊಡಬಲ್ಲೆನು! ನನ್ನಲ್ಲಿ ಹಂಚಿಕೆಗಳಿಗೆ ಕೊರತೆಯಿಲ್ಲ. ಈಗ ನೀವು ಸ್ವಸ್ಥವಾಗಿರ್ರಿ. ಈ ಪತ್ರವನ್ನು ವಕೀಲನಿಗೆ ತೋರಿಸಿ, ಅವನ ಮತತಕ್ಕೊಳ್ಳುವೆನು. ಬಳಿಕ ಯಾವದೊಂದು ಉಪಾಯವನ್ನು ನಿರ್ಧರಿಸುವೆನು. (ಇಬ್ಬರೂ ಹೋಗುವರು.)

---

## ೪ನೆಯ ಪ್ರವೇಶ.

[ತಾರೆಯೂ ಗುಂಡೇರಾಯನೂ ಇರುವರು.]

ತಾರೆ:—ಮೈದುನನೆ, ನಿನ್ನ ವಿಷಯದಲ್ಲಿ ಈ ಮನೆಯಲ್ಲಿ ಬಹಳ ಗೊಂದಲವೆದ್ದಿದೆ. ಈ ಅವಧಿಯಲ್ಲಿ ಇಬ್ಬರು ಮೋಸಗಾರರು ನಾನು ಗುಂಡೇರಾಯ, ನಾನು ಗುಂಡೇರಾಯ ಎಂದು ಹೇಳಿಕೊಳ್ಳುತ್ತ ಬಂದವರು, ತಮ್ಮ ಮೋಸವು ಹೊರಬೀಳುವದೆಂದು ಗೊತ್ತಾದ ಕೂಡಲೆ ಹೋಗಿಬಿಟ್ಟರು. ಆದುದರಿಂದ ನಾನು ನಿನ್ನ ವಿಷಯದಲ್ಲೂ ಸಂದೇಹಗ್ರಸ್ತಳಾಗಿದ್ದೇನೆ. ನೀನು ಇದುವರೆಗೆ ಎಲ್ಲಿದ್ದೆ? ಏನು ಮಾಡುತ್ತಿದ್ದೆ?

ಗುಂಡೇರಾಯ:—ಅಣ್ಣನ ಮುಖದಿಂದ ನೀನು ನನ್ನ ಬಾಲ್ಯಜೀವನದ ಇತಿಹಾಸವನ್ನು ಕೇಳಿಕೊಂಡಿರಬಹುದು. ನಾವಿಬ್ಬರು ಸಹೋದರರಲ್ಲ. ನಾನು ಬಂಡಣ್ಣನ ಕಕ್ಕನ ಮಗನು. ನಾನು ಪ್ರಥಮ ಯೌವನದಲ್ಲಿ ಪಿತ್ರಾರ್ಜಿತ ಆಸ್ತಿಯನ್ನೆಲ್ಲ ವ್ಯಸನಪೂರ್ತಿಯಲ್ಲಿ ಕಳೆದೆನು. ಬಳಿಕ ನನಗೆ ಅನ್ನಕ್ಕೆ ಅಭಾವವಾಯಿತು. ಕೆಲವು ದಿನಗಳನ್ನು ಗೆಳೆಯರ ಹತ್ತಿರ ಕೈಗಡ ಮಾಡಿ, ಸಾವುಕಾರರ ಬಳಿಯಲ್ಲಿ ಸಾಲ ಮಾಡಿ ಕ್ರಮಿಸಿದೆನು. ಮುಂದೆ ಸಾವುಕಾರರ ಉಪದ್ರವವು ಬಹಳವಾಯಿತು. ಗೆಳೆಯರು ಸಹಾಯ ಮಾಡುವದೊತ್ತಟ್ಟಿಗಿರಲಿ, ಮಾತಾಡಿಸದಾದರು. ನಾನು ಇಲ್ಲಿ ಇರುವದು ಸಲ್ಲದೆಂದು ತಿಳಿದು, ಅಣ್ಣನಿಗೆ ಹೇಳದೆ-ಕೇಳದೆ ಮುಂಬಯಿಗೆ ಓಡಿ ಹೋದೆನು. ಅಲ್ಲಿ ಸರಿಯಾದ ಮಾರ್ಗವನ್ನವಲಂಬಿಸಿ ದುಡಿದು ಹೊಟ್ಟೆತುಂಬಿಕೊಳ್ಳಲಿಕ್ಕೆ ಪ್ರಯತ್ನಿಸಿದೆನು; ಸಾಧಿಸಲಿಲ್ಲ. ಹಲವು ಸಣ್ಣ ಧಂದೆಗಳನ್ನವಲಂಬಿಸಿದೆನು. ಯಾವುದರಲ್ಲೂ ಲಾಭವಾಗಲಿಲ್ಲ. ಅಲ್ಲಿಯೂ ಸಾಲವಾಗಹತ್ತಿತು. ಸಾವುಕಾರರ ಉಪದ್ರವವಾಗಹತ್ತಿತು. ಬಳಿಕ ನಾನು ಬೇಜಾರಗೊಂಡು, ಅಡ್ಡದಾರಿಯನ್ನು ಹಿಡಿದೆನು. ಹಲವು ಕುಕರ್ಮಗಳನ್ನು ಮಾಡಿದೆನು. ಆ ಸಮಯದಲ್ಲಿ ನಾನು ಹಲವು ಸಾರೆ ಪೋಲೀಸರ ಕೈಯಲ್ಲಿ ಸಿಕ್ಕು ಪೇಚಾಡಿದೆನು. ಗೌಪ್ಯವಾಗಿದ್ದು ನನ್ನ ವ್ಯವಹಾರವನ್ನು ಸಾಗಿಸಹತ್ತಿದೆನು. ಮೊನ್ನೆ ಒಂದು ಅಂಗಡಿಯಲ್ಲಿ ಒಂದಾಣೆಯ ಉಪಾಹಾರದ ಪದಾರ್ಥವನ್ನು ಕೊಂಡೆನು. ಅಂಗಡಿಕಾರನು ಉಪಾಹಾರವನ್ನು ಕಟ್ಟಿಕೊಟ್ಟದ್ದ ಕಾಗದವು ಸಹಜ

ವಾಗಿ ನನ್ನ ಕಣ್ಣಿಗೆ ಬಿತ್ತು. ಅದರಲ್ಲಿ ಲಕ್ಷ್ಮಿ ವಕೀಲನು ಕೊಟ್ಟ ಜಾಹೀ ರಾತು ಇತ್ತು. ನಾನು ಅಣ್ಣನ ಮರಣದ ಸುದ್ದಿಯನ್ನು ತಿಳಿದು ಹೊರಟು ಬಂದೆನು.

ತಾರೆ:—ಮೈದುನನೆ, ಇವರ ಹಾಗು ನಿನ್ನ ಚರಿತ್ರೆಯು ಬಹು ಭಾಗವು ಹೋಲಿಕೆಯುಳ್ಳದ್ದಾಗಿದೆ. ನೀನೇ ಇವರ ತಮ್ಮನೆಂಬುದಕ್ಕೆ ಇದು ಬಹು ದೊಡ್ಡ ಆಧಾರವು. ಈ ವಿಶ್ವಾಸಾರ್ಹಪ್ರಮಾಣದಿಂದ ನಿನ್ನನ್ನು ಗುಂಡೇ ರಾಯನೆಂದು ನಂಬುತ್ತೇನೆ. ಇನ್ನು ಆ ಲಕ್ಷ ರೂಪಾಯಿಗಳನ್ನು ದೊರಕಿಸ ಲಿಕ್ಕೆ ಹೇಗೆ ಪ್ರಯತ್ನಿಸುವೆ?

ಗುಂಡೇರಾಯ:-ಅತ್ತಿಗೆ, ನಾನು ಮುಂಬಯಿಯಿಂದಲೇ ಪತ್ರ ಬರೆದು ವಕೀಲನಿಗೆ ತಿಳುಹಿದ್ದೇನೆ. ಅಣ್ಣನು ಇದ್ದರೆ ಒಳಿತಾಗುತ್ತಿತ್ತು. ಧನದ ಅಡ ಚಣಿಯಲ್ಲಿ ಸಿಕ್ಕ ನಾವಿಬ್ಬರು, ಈ ಹಣವನ್ನು ಸರಿಯಾಗಿ ಹಂಚಿಕೊಂಡು ಸುಖದಿಂದ ಕಾಲ ಕಳೆಯಬಹುದಾಗಿತ್ತು. ಅತ್ತಿಗೆ, ನಾನೊಂದು ಮಾತ ಕೇಳುವೆನು; ಅಣ್ಣನು ನಿಜವಾಗಿಯೂ ಸತ್ತಿರುವನೇ?

ತಾರೆ.—ನಿನಗೆ ಇನ್ನೂ ಸಂದೇಹವಿದೆಯೇನು? ಶ್ರಾದ್ಧಾದಿ ಕಾರ್ಯ ಗಳೆಲ್ಲ ಸಾಗಿ ಹೋಗಿವೆ!

ಗುಂಡೇರಾಯ: – ನೀನು ಅವನ ಹೆಣವನ್ನು ಕಣ್ಮುಟ್ಟ ಕಂಡಿರು ವೆಯಾ? ನದಿಯಲ್ಲಿ ಬಿದ್ದವನು ಪ್ರವಾಹದ ಕೂಡ ತೇಲುತ್ತ ಹೋಗಿ, ಎಲ್ಲಿ ಯಾದರೂ ದಂಡೆಗೆ ಹತ್ತಿ ಜೀವಿಸುವ ಸಂಭವವಿದೆ! ನೀನಿದರ ವಿಚಾರ ಮಾಡದೆ, ಶ್ರಾದ್ಧಾದಿ ಕಾರ್ಯಗಳನ್ನು ಸಾಗಿಸಿದ್ದು ಸರಿಯಾಗಲಿಲ್ಲ!

ತಾರೆ:—ಪ್ರಿಯ ಮೈದುನನೆ, ಇನ್ನು ಈ ಆಶೆಗೆ ಅವಕಾಶವೆಲ್ಲಿ? ಜೀವಿ ಸಿದ್ದರೆ ಈ ಅವಧಿಯಲ್ಲಿಯೆ ಮನೆಗೆ ಬರುತ್ತಿದ್ದಿಲ್ಲವೆ? (ವಿಷಾದವನ್ನು ಸೂಚಿಸುವಳು.)

ಗುಂಡೇರಾಯ:—ನಿರಾಶಳಾಗಬೇಡ. ಭವಿತವ್ಯವು ಹೇಗೆ ಇದೆಯೊ ಏನೊ! ಹೀಗೆ ಅಪಘಾತದಿಂದ ಮಡಿದರೆಂದು ವಾರ್ತೆಯನ್ನು ಹರಡಿಸಿಕೊಂ ಡವರು, ಎಷ್ಟೋ ವರ್ಷಗಳ ತರುವಾಯದಲ್ಲಿ ಕಾಣಿಸಿಕೊಂಡ ಹಲವು ಕಥೆ ಗಳನ್ನು ನಾನು ಕೇಳಿದ್ದೇನೆ!

ತಾರೆ:—(ಹರ್ಷವನ್ನು ಸೂಚಿಸಿ) ಪ್ರಿಯ ಮೈದುನನೆ, ಹೀಗಾಗಲಿ! ನಿನ್ನ

ಬಾಯಿಯಲ್ಲಿ ಸಕ್ಕರೆ ಬೀಳಲಿ! ಮೈದುನನೆ, ನಾನು ನಿನಗೆ ಒಂದು ಆನಂದದ ಸಂಗತಿಯ ಹೇಳತಕ್ಕವಳಿದ್ದೇನೆ. ನಿನ್ನ ಹೆಂಡತಿಯು ನಿನ್ನನ್ನು ಹುಡುಕುತ್ತ ಇಲ್ಲಿಗೆ ಬಂದಿರುವಳು. ಈಗ ಮನೆಯಲ್ಲಿರುವಳು. ನಾನು ಈಗ ನಿನಗೆ ಅವಳ ದರ್ಶನ ಮಾಡಿಸಬೇಕೆಂದಿರುವೆನು.

ಗುಂಡೇರಾಯ:—ಏನು! ನನ್ನ ಹೆಂಡತಿ ಬಂದಿರುವಳೆ? ಅತ್ತಿಗೆ, ನೀನು ಉಪಹಾಸ ಮಾಡುತ್ತಿರುವೆ!

ತಾರೆ:—ಕೇವಲ ಹೆಂಡತಿಯೊಬ್ಬಳೇ ಅಲ್ಲ; ಸೋದರತ್ತೆಯೂ ಬಂದಿದ್ದಳು; ಆದರೆ ನಾನವಳನ್ನು ಯುಕ್ತಿಯಿಂದ ಓಡಿಸಿಬಿಟ್ಟೆನು ನಿನ್ನ ಹೆಂಡತಿಯು ಮಾತ್ರ ಈಗಲೂ ಇಲ್ಲಿಯೆ ಇರುವಳು.

ಗುಂಡೇರಾಯ:—ಅತ್ತಿಗೆ, ನಾನು ವಿವಾಹವನ್ನೇ ಮಾಡಿಕೊಂಡಿಲ್ಲ. ಅಂದಬಳಿಕ ಹೆಂಡತಿಯೆಲ್ಲಿಂದ ಬರಬೇಕು?

ತಾರೆ:—ನೀನು ಮಲೆಯಾಳಕ್ಕೆ ಹೋಗಿದ್ದಿಯಲ್ಲವೆ? ಅಲ್ಲಿಯ ಒಬ್ಬ ಹೆಂಗುಸನ್ನು ಲಗ್ನ ಮಾಡಿಕೊಂಡಿರಲಿಲ್ಲವೆ? ಮುಂದೆ ನೀವಿಬ್ಬರೂ ಬಡೆದಾಡಿ, ಕಡೆಗೆ ನೀನು ಹೆಂಡತಿಯು ಬಡಿಗೆಯು ಹೊಡತಕ್ಕೆ ಹೆದರಿ ಓಡಿ ಹೋಗಲಿಲ್ಲವೆ?

ಗುಂಡೇರಾಯ:—ಎಲ್ಲವೂ ಸುಳ್ಳು! ಕೇವಲ ಕಟ್ಟುಕತೆ!!

(ಕಮಲೆಯು ಬರುವಳು.)

ಕಮಲೆ: —(ಗುಂಡೇರಾಯನ ಕಡೆಗೆ ವಿಹ್ವಲ ದೃಷ್ಟಿಯಿಂದ ನೋಡಿ) ಬಂದಿರುವಿರಾ?....ಪ್ರಾಣನಾಥ!....(ಗುಂಡೇರಾಯನ ಕೈಯು ಹಿಡಿಯು ಹೋಗುವಳು.)

ಗುಂಡೇ(ಆಶ್ಚರ್ಯದಿಂದ):—ಯಾರು ನೀನು? (ದೂರ ಸರಿಯುವನು)

ಕಮಲೆ (ಮೋರೆಯಲ್ಲಿ ನಗುವನ್ನು ತಂದುಕೊಂಡು):—ಪ್ರಾಣೇಶ್ವರ....

(ಹತ್ತಿರ ಹೋಗುವಳು)

ಗುಂಡೇರಾಯ:—ಸುಂದರಿ, ನೀನು ಯಾವಳೇ ಇರಲೊಲ್ಲೆಯೇಕೆ? ಮೋಸ ಹೋಗಿರುವೆ! ಭ್ರಾಂತಳಾಗಿ ನನ್ನೊಡನೆ ವ್ಯವಹರಿಸ ಬಂದಿರುವೆ! ಕಣ್ತೆರೆದು ನೋಡು! ಚನ್ನಾಗಿ ಯೋಚಿಸು!

ಕಮಲೆ:-ಜೀವಿತೇಶ್ವರ, ನನ್ನೊಡನೆ ಹುಡುಗಾಟವಾಡುವಿರಾ? ಅದೇ ಮುಖ, ಅವೇ ಕಣ್ಣುಗಳು; ಅದೇ ಪರಿಚಿತ ಸ್ವರ! ಹೀಗಿರಲು, ಹಾರಿಸಿಕೊಂಡು ಮಾತಾಡಿದರೆ ನಾನು ಕೇಳತಕ್ಕವಳಲ್ಲ!

ತಾರೆ:—ತಂಗೀ, ಹಿಂದೆ ಆಗಮಿಸಿದ್ದ ಇಬ್ಬರು ಗುಂಡೇರಾಯರಿಗೂ ನೀನು ಹೀಗೆಯೇ ಮಾತಾಡಿದೆ! ಈಗ ಇವನೊಡನೆಯೂ ಹಾಗೆಯೇ ವ್ಯವಹರಿಸ ತೊಡಗಿರುವೆ! ತಂಗೀ, ಹಗಲೆಲ್ಲ ಮೋಸ ಹೋಗುವದು ಸರಿಯಲ್ಲ! ಯೋಚಿಸು ವರ್ತಿಸು!

ಕಮಲೆ:- ಮೂರಕ್ಕೆ ಮುಕ್ತಿಯೆಂದು ಹೇಳಿದೆ! ಈ ಸಾರಿ ಹಾಗಾಗದು!

ತಾರೆ:—ಆದರೂ ಸಾವಧಾನತೆಯಿಂದ ವರ್ತಿಸು. ಪ್ರಸಂಗವು ಹೇಳಿ ಕೇಳಿ ಬರುವದಿಲ್ಲ! ಕಂಡಕಂಡವರನ್ನು ಪತಿರಾಯರೆಂದು ಸಂಬೋಧಿಸುವುದು ತೀರ ಅನುಚಿತವಾದದ್ದು!

ಕಮಲೆ (ಗುಂಡೇರಾಯನ ಕಡೆಗೆ ಮೋರೆ ಮಾಡಿ):—ಹೀಗೆ ನನ್ನ ವಿಷಯದಲ್ಲಿ ನಿರ್ದಯರಾಗಬೇಡಿರಿ.........ಪರಿಹಾಸವನ್ನು ಬಿಟ್ಟು ನನ್ನೊಡನೆ ಸರಿಯಾಗಿ ಮಾತನಾಡಿ.........

ಗುಂಡೇರಾಯ:—ಇನ್ನೂ ನಿನ್ನ ಭ್ರಾಂತಿಯು ಹೋಗಲೊಲ್ಲದೆ? ಸುಂದರಿ, ನಾನೆಂದೂ ವಿವಾಹ ಮಾಡಿಕೊಂಡವನಲ್ಲ! ಹೀಗಿರಲು, ನನ್ನ ಹೆಂಡತಿಯ ಅಸ್ತಿತ್ವವೆಲ್ಲಿ?

ಕಮಲೆ:—ಆದೊಂದು ವಿಷ ವೇಳೆ! ಅಂದು ನನ್ನ ಡೊಣ್ಣೆಯ ಹೊಡತಕ್ಕೆ ಹೌಹಾರಿ ಓಡಿ ಹೋದವರು, ಇಂದು ಮತ್ತೆ ನನ್ನ ಹತ್ತರ ಬಂದಿರುವಿರಿ. ಆ ಹೊಡತದಿಂದ ನೀವು ನನ್ನ ವಿಷಯದಲ್ಲಿ ಹೇಯ ಭಾವನೆಯನ್ನು ತಾಳಿ, ಮದುವೆಯನ್ನೂ ಮಡದಿಯಾದ ನನ್ನನ್ನೂ ಮರೆದಿರುವಂತೆ ತೋರುತ್ತಿದೆ! ಕ್ಷಮಿಸಿರಿ. ಪುನಃ ನನ್ನ ವಿಷಯದಲ್ಲಿ ಮೊದಲಿನಂತೆ ಅನುರಾಗವುಳ್ಳವರಾಗಿರಿ! ನಾನಿನ್ನು ಆ ತರದ ಕೆಲಸವನ್ನು ಎಂದೂ ಮಾಡುವುದಿಲ್ಲ. ಪಶ್ಚಾತ್ತಾಪವನ್ನು ಪ್ರಕಟಿಸಿ ಹೇಳಿಕೊಳ್ಳುತ್ತೇನೆ! ದಯೆದೋರಿ ವಿರಹಾನಲದಿಂದ ತಪ್ತಳಾದ ನನ್ನನ್ನು ಶಾಂತಗೊಳಿಸಿರಿ! (ಕಾಲಮೇಲೆ ಬೀಳಹೋಗುವಳು.)

ಗುಂಡೇರಾಯ: – ಛೀ! ನೀಚ ನಾರಿಯೆ, ಸರಿಯತ್ತ! ಪರಪುರುಷನಿಗೆ ಪ್ರಿಯತಮನೆಂದು ಕರೆಯಲಿಕ್ಕೆ ನಿನಗೆ ನಾಚುಕೆಯಾಗುವದಿಲ್ಲವೆ? ನಿರ್ಲಜ್ಜಳೆ, ನಿನ್ನ ಈ ಆಡಂಬರದ ನಟನೆಯನ್ನು ನಡೆಯಗೊಡುವವನು ನಾನಲ್ಲ. ದೂರ ಹೋಗು.

ಕಮಲೆ:-ನನ್ನ ವಿಷಯದಲ್ಲಿ ಅಸೂಯೆಗೊಂಡ ಅಕ್ಕನು ನಿಮಗೆ ಮದ್ದು ಮಾಟ ಮಾಡಿಸಿರಬೇಕು! ಇಲ್ಲವಾದರೆ ನೀವು ಹೀಗೆ ನನ್ನನ್ನು ಸಂಪೂರ್ಣ ರೀತಿಯಿಂದ ಮರೆಯುವ ಸಂಭವವಿತ್ತೆ?

ತಾರೆ:—ಛೀ, ಗಯ್ಯಾಳಿ! ಈಗ ನನ್ನ ಸುತ್ತ ಬಂದೆಯಾ? ಹಿಂದಿನವರಿಬ್ಬರು ಮೋಸಗಾರರಿದ್ದರು. ಅವರು ತಾವು ವಂಚಕರಾದ್ದರಿಂದ ನಿನ್ನ ಮೋಸವನ್ನು ಬೈಲಿಗೆಳೆಯಲಿಕ್ಕೆ ಸಮರ್ಥರಾಗಲಿಲ್ಲ; ಆದರೆ ಇವನು ನಿಜವಾಗಿಯೂ ಗುಂಡೇರಾಯನು. ಇವನ ಮುಂದೆ ನಿನ್ನಾಟವೆಷ್ಟು ಮಾತ್ರಕ್ಕೂ ನಡೆಯದು! ನೀನು ಈ ನಾಟಕದ ಹವ್ಯಾಸವನ್ನು ಬಿಟ್ಟು, ಸುಮ್ಮನೆ ಹೊರಟು ಹೋಗು!

ಕಮಲೆ:—ಅಕ್ಕಾ, ಇನ್ನು ನಾನು ಎಲ್ಲಿಗೆ ಹೋಗಲಿ? ಏನ ಮಾಡಲಿ? ಮುಂದೆ ನನ್ನ ಗತಿಯೇನು?

ತಾರೆ:—ತಂಗಿ, ಚಿಂತಿಸಬೇಡ! ಈ ನಾಟಕವು ಎರಡು ಗಳಿಗೆಯದು! ಇದು ಸಮಾಪ್ತವಾದಂತಾಯಿತು. ಇನ್ನು ನೀನು ಮೊದಲು ಎಲ್ಲಿದ್ದೆಯೋ ಅಲ್ಲಿಗೆ ಹೋಗು. ಯಾವ ಹೋರೆಯನ್ನು ಮಾಡುತ್ತಿದ್ದೆಯೋ, ಅದನ್ನು ಅವಲಂಬಿಸು.

ಕಮಲೆ:—ಅವ್ವಯ್ಯ! ಒಳ್ಳೇ ಕಠಿಣ ಪ್ರಸಂಗವೊದಗಿತು! ನಚ್ಚಿದೆಮ್ಮೆಯು ಕೋಣವನ್ನೀದಂತಾಯ್ತು! (ನಿಟ್ಟುಸಿರ ಬಿಡುವಳು.)

ಗುಂಡೇರಾಯ:—ಸುಂದರಿ, ಹೀಗೆ ಹತಾಶಳಾಗಬೇಡ; ಹುರುಪಿನಿಂದ ಹೊರಡು. ವಿಶಾಲವಾದ ಈ ಹುಬ್ಬಳ್ಳಿಯಲ್ಲಿ ಕಾರ್ಯಕ್ಷೇತ್ರಕ್ಕೆ ಕೊರತೆಯಿಲ್ಲ. ಮುಂಬಯಿಯ ಮಾದರಿಯಂತೆ ಬೆಳೆಯುತ್ತ ನಡೆದಿದ್ದ ಈ ಹುಬ್ಬಳ್ಳಿಗೆ ದೂರದೂರದ ಹಳ್ಳಿಗಳಿಂದ ಬಂದ ಸುಂದರಿಯರು ಇಲ್ಲಿ ಚಿರವಾಸ್ತವ್ಯವನ್ನು ಹೂಡಿ, ವಿಲಾಸದಿಂದ ಕಾಲ ಕಳೆಯುತ್ತಿರುವರು! ಇಷ್ಟವಿದ್ದರೆ, ನೀನವರ ದಲದಲ್ಲಿ ಸೇರಿ, ಆಡಂಬರದಿಂದ ಕಾಲಯಾಪನೆ ಮಾಡಬಲ್ಲೆ!

ಕಮಲೆ:—ನನ್ನ ಹೃದಯವೇದನೆಯನ್ನು ನೀವು ಅರಿಯಿರಿ. ಪರಿಹಾಸ ಮಾಡುವದರಲ್ಲಿ ವ್ಯಸ್ತರಾಗಿರುವಿರಿ! ಬೆಕ್ಕಿಗೆ ಆಟ, ಇಲಿಗೆ ಪ್ರಾಣಸಂಕಟವೆಂದು ಅನ್ನುತ್ತಿರುವದು ಸುಳ್ಳಲ್ಲ!

ತಾರೆ:—ತಂಗೀ, ಹೃದಯವೇದನೆಯು ಹೆಚ್ಚಾಗಿದ್ದರೆ ದವಾಖಾನೆಗೆ

ಹೋಗು! ಈ ಹುಬ್ಬಳ್ಳಿಯಲ್ಲಿ ದವಾಖಾನೆಗಳಿಗೆ ಕೊರತೆಯಿಲ್ಲ! ಓಣಿಗೆ ಒಂದೆರಡಾದರೂ ದವಾಖಾನೆಗಳಿವೆ! ಚಾತಕಪಕ್ಷಿಯು ಮಳೆಯನ್ನು ನಿರೀಕ್ಷಿಸಿಕೊಂಡಿರುವಂತೆ, ರೋಗಿಗಳ ಮಾರ್ಗ-ಪ್ರತೀಕ್ಷೆ ಮಾಡುತ್ತ ಕುಳಿತಿರುವ ಡಾಕ್ಟರರಿದ್ದಾರೆ!

ಕಮಲೆ:—ಇನ್ನು ನಿನ್ನ ಹುಡುಗಾಟಿಕೆಯನ್ನು ಸಾಕು ಮಾಡು! ನಿನ್ನ ಪರಿಹಾಸದ ವಿಷಯಳಾಗಿ ಇಲ್ಲಿರಲಿಕ್ಕೆ ನಾನೊಲ್ಲೆನು. ಹೋಗುವೆನು! ರಾಯರೆ, ನಾನು ಹೋಗುವೆನು. ಗಾಡಿಯನ್ನು ತರಿಸಿ ಕೊಡಿರಿ.

ಗುಂಡೇರಾಯ:—ಅವಶ್ಯವಾಗಿ ಹೋಗು! (ಕೆಂಚನನ್ನು ಕರೆದು ರೂಪಾಯಿ ಕೊಟ್ಟು) ಗಾಡಿಯನ್ನು ತಂದು, ಅದರಲ್ಲಿ ಇವಳನ್ನು ಕೂಡಿಸಿ ಕಳುಹಿ ಬಾ. (ಕೆಂಚನೂ ಕಮಲೆಯೂ ಹೋಗುವರು; ಲಕ್ಷ್ಮೆ ವಕೀಲನು ಬರುವನು.)

ತಾರೆ (ಕುರ್ಚಿಯನ್ನು ತಂದಿರಿಸಿ):—ಬರ್ರಿ, ವಕೀಲಸಾಹೇಬರೆ, ನಾವು ನಿಮ್ಮ ಹಾದಿಯನ್ನೇ ನೋಡುತ್ತಿದ್ದೆವು.

ಲಕ್ಷ್ಮೆ (ಕುಳಿತು):—ಮತ್ತೇನು ಕೆಲಸವಿರುವದು?

ತಾರೆ:—ಇವನು ನನ್ನ ಮೈದುನ ಗುಂಡೇರಾಯ. ಹಿಂದಿನವರಿಬ್ಬರು ಸುಳ್ಳು ಗುಂಡೇರಾಯರು. ಇವನು ನಿಜವಾಗಿಯೂ ಗುಂಡೇರಾಯನು.

ಲಕ್ಷ್ಮೆ:—ಈ ಮಾತಿಗೆ ಆಧಾರವೇನು? ಬಲವಾದ ಸಾಕ್ಷಿ-ಪುರಾವೆಗಳಿವೆಯೆ?

ಗುಂಡೇರಾಯ:—ಗುಂಡೇರಾಯನಾಗಿದ್ದ ನಾನು, ಗುಂಡೇರಾಯನೆಂದು ಸಿದ್ಧಮಾಡಿಕೊಡಲಿಕ್ಕೆ ಸಾಕ್ಷಿ-ಪುರಾವೆಗಳು ಬೇಕೆ? ಕಾಯ್ದೆಯ ವಿಚಾರವು ಬಹು ಗಹನವಾದದ್ದು!

ಲಕ್ಷ್ಮೆ:—ತಮ್ಮಾ, ಇದು ಇಂಗ್ಲಿಷ ಸರಕಾರದ ರಾಜ್ಯವು! ಮೊಗಲಾಯಿಯ ಆಳಿಕೆಯಲ್ಲ! ಸರಕಾರವು ಸಾಕ್ಷಿ-ಪುರಾವೆಗಳ ಆಧಾರವಿಲ್ಲದೆ, ಯಾವ ಮಾತನ್ನೂ ನಂಬುವದಿಲ್ಲ.

ತಾರೆ:—ವಕೀಲಸಾಹೇಬರೇ, ನಾನು ಹಲವು ಹಂಚಿಕೆಗಳಿಂದ ಇವನನ್ನು ಪರೀಕ್ಷಿಸಿದ್ದೇನೆ. ಇವನೇ ಗುಂಡೇರಾಯನೆಂದು ಮನವರಿಕೆ ಮಾಡಿಕೊಂಡಿದ್ದೇನೆ! ಮುಖ್ಯ ಮಾತೆಂದರೆ, ಇವರ ಹಾಗು ಇವನ ಆಚಾರ-ವಿಚಾರ

ಗಳಲ್ಲಿ, ಮಾತು-ಕತೆಗಳಲ್ಲಿ ತುಂಬ ಸಾಮ್ಯವಿದೆ! ಉಳಿದ ಆಧಾರಗಳು ಯಾವವೂ ದೊರೆಯದಿದ್ದರೂ, ಇಷ್ಟರಿಂದಲೆ ಇವನು ಇವರ ತಮ್ಮನೆಂದು ನಾನು ನಿರ್ಧರಿಸಲಿಕ್ಕೆ ಒಪ್ಪುತ್ತಿದ್ದೆನು.!

ಲಕ್ಷ್ಮಿ—ನಿಮ್ಮ ಖಾತ್ರಿಯಿದ್ದರಾಯಿತು. ಈಗ ಕಚೇರಿಯಲ್ಲಿ ಇವನು ಗುಂಡೇರಾಯನೆಂದು ಸಿದ್ಧಮಾಡುವ ಪ್ರಸಂಗವೇನೂ ಇಲ್ಲ. (ಗುಂಡೇರಾಯನನ್ನು ನೋಡಿ) ನೀನು ಮೃತ್ಯುಪತ್ರದ ಸಂಗತಿಯನ್ನು ಕೇಳಿರುವೆಯಷ್ಟೆ?

ಗುಂಡೇರಾಯ:—ಅತ್ತಿಗೆಯು ಎಲ್ಲವನ್ನೂ ಹೇಳಿದ್ದಾಳೆ.

ಲಕ್ಷ್ಮಿ:—ಕೇವಲ ಕೇಳಿಕೊಂಡು ಉಪಯೋಗವಿಲ್ಲ. ಮೂಲ ಕಾಗದಗಳನ್ನು ನೋಡಿಟ್ಟಿರಬೇಕು. ಮೃತ್ಯುಪತ್ರವು ನನ್ನ ಹತ್ತಿರದೆ. ಬೇಕಾದರೆ ಕೊಡುವೆನು.

ಗುಂಡೇರಾಯ:—ತರ್ರಿ. (ವಕೀಲನು ಕೊಡುವನು. ಗುಂಡೇರಾಯನು ಓದಿಕೊಳ್ಳುವನು.)

(ನೇಪಥ್ಯದಲ್ಲಿ ಹಾಡಿದ ಸ್ವರವು ಕೇಳಬರುತ್ತಿದೆ. ತಾರೆಯು ಅದನ್ನು ಕೇಳಿ ಆಶ್ಚರ್ಯಾನ್ವಿತಳಾದಂತೆ ನಟಿಸಿ)

ತಾರೆ:—ವಕೀಲಸಾಹೇಬರೆ, ಹೊರಗೆ ಯಾರೋ ಹಾಡುತ್ತಿರುವರಲ್ಲವೆ? ಇವರ ಸ್ವರವೆಂದು ನನಗೆ ಅನಿಸುತ್ತದೆ!

ಲಕ್ಷ್ಮಿ (ಆಶ್ಚರ್ಯದಿಂದ):—ಇವರೆಂದರೆ?

ತಾರೆ:—ನನ್ನ ಯಜಮಾನರು............

ಲಕ್ಷ್ಮಿ:—ನೀವು ಭ್ರಾಂತರಾಗಿರುವಿರಿ! ಮೊನ್ನೆ ಮೊನ್ನೆ ವಿಧವೆಯಾಗಿರುವಿರಿ. ಹೀಗಾಗುವುದು ಸ್ವಾಭಾವಿಕವು!

ತಾರೆ:—ಇದು ಭ್ರಾಂತಿಯಲ್ಲ! ನಿಜವಾಗಿಯೂ ಇವರ ಸ್ವರವು! (ಪರಿಚಾರಿಕೆಯನ್ನು ಕೂಗಿ ಹಾಡುವವನನ್ನು ಕರೆತರುವಂತೆ ಆಜ್ಞಾಪಿಸುವಳು. ಭಿಕ್ಷುಕನ ವೇಷದಲ್ಲಿದ್ದ ಬಂಡೇರಾಯನು ಪ್ರವೇಶಿಸುವನು. ವಕೀಲನೂ ಗುಂಡೇರಾಯನೂ ಆಶ್ಚರ್ಯದಿಂದ ನೋಡುವರು.)

ಬಂಡೇರಾಯ:—ನಿಜವಾಗಿಯೂ ನಾನು ನನ್ನ ಮನೆಗೆ ಬಂದಿದ್ದೇನೆ. ಇವಳು ನನ್ನ ಪ್ರಿಯತಮೆಯು. ಅವನು ವಕೀಲನು. (ಗುಂಡೇರಾಯನನ್ನು

ನೋಡಿ) ಇವನಾರು? (ತಾರೆಯು ಧಾವಿಸಿ ಹೋಗಿ ಪತಿಯ ಪಾದಗಳ ಮೇಲೆ ಬೀಳು ವಳು. ಬಂಡೇರಾಯನು ಹೆಂಡತಿಯನ್ನು ಎಬ್ಬಿಸುವನು. ವಕೀಲನೂ, ಗುಂಡೇರಾಯನೂ ಆಶ್ಚರ್ಯಾತಿಶಯದಿಂದ ನೋಡುವರು.)

ಲಕ್ಷ್ಮೆ (ಸ್ವಗತಂ):—ಇವನು ಬಂಡೇರಾಯನು. ಸತ್ತು ಹೋದವನು ಹೇಗೆ ಇಲ್ಲಿಗೆ ಬಂದನು? ವಿಚಾರಿಸುವೆನು. (ಪ್ರಕಾಶ ರೀತಿಯಿಂದ) ತಮ್ಮಾ, ನೀನು ತುಂಗಭದ್ರೆಯ ಮಡುವಿನಲ್ಲಿ ಸಿಕ್ಕು ಸತ್ತು ಹೋದೆಯೆಂದು ನಾನು ಕೇಳಿದ್ದೆನು. ಇಲ್ಲಿ ನಿನ್ನ ಹೆಂಡತಿಯು ಶ್ರಾದ್ಧಾದಿ ಕೆಲಸಗಳನ್ನೂ ಮಾಡಿಸಿ ಬಿಟ್ಟಳಂತೆ. ಹೀಗಿರಲು, ನೀನು ಮತ್ತೆ ಬದುಕಿ ಬಂದದ್ದು ಹೇಗೆ?

ಬಂಡೇರಾಯ:—ವಕೀಲರೆ, ನಾನು ತುಂಗಭದ್ರೆಯಲ್ಲಿ ಬಿದ್ದದ್ದೇನೋ ನಿಜ; ಆದರೆ ಮಡುವಿನಲ್ಲಿ ಸಿಗಲಿಲ್ಲ. ಪ್ರವಾಹದ ಕೂಡ ತೇಲುತ್ತ ಹೋಗಿ ದೂರ ದೇಶದಲ್ಲಿಯ ಧಡಕ್ಕೆ ಹತ್ತಿದೆನು. ಹತ್ತರೇನೂ ಇರಲಿಲ್ಲ. ಭಿಕ್ಷುಕನಾಗಿ ಭಿಕ್ಷೆ ಬೇಡಿ ಉಪಜೀವಿಸುತ್ತ ಇಲ್ಲಿಗೆ ಬಂದೆನು.

ಲಕ್ಷ್ಮೆ:—ಸ್ತ್ರೀಯರ ಚರಿತ್ರವನ್ನೂ ಪುರುಷರ ಭಾಗ್ಯವನ್ನೂ ಅರಿಯುವುದು ದೇವರಿಗೇ ಅಸಾಧ್ಯವಾಗಿರಲು, ಮನುಷ್ಯನ ಪಾಡೇನು? ತಮ್ಮಾ, ನೀನು ಜೀವಿಸಿ ಬಂದುದು ಬಹು ಆನಂದದ ಸಂಗತಿಯು! ನಿನ್ನ ಈ ಸುಶಿಕ್ಷಿತೆಯೂ, ಸುಂದರಿಯೂ ಆದ ಸತಿಯು ಅಕಾಲ ವೈಧವ್ಯವನ್ನನುಭವಿಸುವ ದುಃಖವನ್ನು ಹೊಂದಿದುದಕ್ಕಾಗಿ ನನಗೆ ಪರಮ ವಿಷಾದವಾಗಿತ್ತು. ಆ ವಿಷಾದವು ನಿನ್ನ ಆಗಮನದಿಂದ ಅಳಿಯಿತಿಷ್ಟೇ ಅಲ್ಲ, ಆ ಸ್ಥಳದಲ್ಲಿ ಆನಂದಾತಿರೇಕವು ವಾಸಿಸಹತ್ತಿದೆ. ಈ ಆನಂದದ ಪ್ರಸಂಗವಲ್ಲಿ ನಾನು ನಿನ್ನ ಈ ಸಾಧ್ವಿಗೆ ಸೌಭಾಗ್ಯವತಿಯಾಗಿ ಬಹು ಕಾಲ ಬಾಳೆಂದು ಆಶೀರ್ವದಿಸುತ್ತೇನೆ.

ತಾರೆ:—ಇದು ವಕೀಲಸಾಹೇಬರ ಪರಮಾನುಗ್ರಹವು!

ಬಂಡೇರಾಯ(ಗುಂಡೇರಾಯನನ್ನು ದಿಟ್ಟಿಸಿ ನೋಡಿ):—ಓಹೋ! ಇವನು ನನ್ನ ಕಕ್ಕನ ಮಗನು. ತಮ್ಮಾ, ನೀನೆಂದು ಬಂದೆ? ಇದು ವರೆಗೆ ಎಲ್ಲಿದ್ದೆ?

ಗುಂಡೇರಾಯ(ಅಣ್ಣನಿಗೆ ನಮಸ್ಕರಿಸಿ):-ಅಣ್ಣಾ, ಮುಂಬಯಿಯಲ್ಲಿದ್ದೆನು. ನಿನ್ನ ಮರಣವಾರ್ತೆಯನ್ನು ಕೇಳಿ ದುಃಖಿತನಾಗಿ, ನಿನ್ನೆ ಇಲ್ಲಿಗೆ ಬಂದೆನು.

ಬಂಡೇರಾಯ:—ಒಳಿತಾಯಿತು. ಮೃತ್ಯುಪತ್ರದ ಸಂಗತಿಯನ್ನು ಕೇಳಿರುವೆಯಷ್ಟೆ?

ಗುಂಡೇರಾಯ:—ಅತ್ತಿಗೆಯಿಂದ ಎಲ್ಲ ಸಂಗತಿಗಳನ್ನು ಕೇಳಿ ತಿಳಿದಿದ್ದೆನು. ವಕೀಲಸಾಹೇಬರೂ ಮತ್ಯುಪತ್ರವನ್ನು ಕೊಟ್ಟರು. ಓದಿಕೊಂಡಿರುವೆನು.

ಬಂಡೇರಾಯ:—ಇನ್ನು ಆ ಹಣಕ್ಕಾಗಿ ನಾವಿಬ್ಬರು ಕಲಹಿಸುವದು ಸರಿಯಲ್ಲ. ನಾನು ಜೀವಿಸಿರುವ ವರೆಗೆ ನಿನಗೆ ಅದರಲ್ಲಿಯ ಒಂದು ಕಾಸು ಸಹ ಸಿಗುವಂತಿಲ್ಲ. ನಿನಗೆ ಆ ಹಣವು ಸಿಗಬೇಕಾದರೆ, ನೀನು ನನ್ನ ಮರಣದ ಮಾರ್ಗನಿರೀಕ್ಷಣೆಯನ್ನು ಮಾಡಿಕೊಂಡಿರಬೇಕು! ಇದು ನಮ್ಮಿಬ್ಬರಿಗೂ ಸರಿಯಲ್ಲ! ಈಗ ಬರತಕ್ಕ ಆ ಹಣದಲ್ಲಿ ಎರಡು ಭಾಗಗಳನ್ನು ಮಾಡೋಣ. ಒಂದನ್ನು ನೀನು ತಕ್ಕೋ. ಮತ್ತೊಂದನ್ನು ನನಗೆ ಕೊಡು. ಇದಕ್ಕೆ ನೀನು ಒಪ್ಪಿಕೊಳ್ಳುವಿಯಾ?

ಗುಂಡೇರಾಯ:—ಒಪ್ಪದೇನು ಮಾಡಲಿ? ನಾನೂ ನಿನ್ನಂತೆಯೆ ವಿಲಾಸಿಯು. ದರಿದ್ರನು. ಸಾಲಗಾರನು. ವ್ಯಾಪಾರದಲ್ಲಿ ಹಲವು ಸಾರೆ ದಿವಾಳಿ ತೆಗೆದವನು. ನನಗೀಗ ಹಣದ ಅವಶ್ಯಕತೆಯು ಬಹಳವಿದೆ!

ಬಂಡೇರಾಯ:—ನೀನು ನಿಜವಾದ ನನ್ನ ತಮ್ಮನು- (ತಮ್ಮನನ್ನು ಆಲಿಂಗಿಸುವನು )

ತಾರೆ:—ವಕೀಲಸಾಹೇಬರೇ, ಇನ್ನು ವಾರಸಾ ವಿಚಾರದಲ್ಲಿ ಗೊಂದಲವೇನೂ ಉಳಿಯಲಿಲ್ಲ. ಆ ಹಣವು ನಮ್ಮ ಕೈ ಸೇರಲಿಕ್ಕೆ ತಡವೇಕೆ?

ಲತ್ತೆ:—ಇದು ಸರಕಾರಿ ಬ್ಯಾಂಕಿನ ಕೆಲಸ. ಮನೆಯ ಕೆಲಸದಂತೆ ಬೇಗ ಮುಗಿಯತಕ್ಕದ್ದಲ್ಲ! ಇದಕ್ಕಾಗಿ ನಾನು ವಹಿಸಿದ ಶ್ರಮವು ಅಷ್ಟಿಷ್ಟೆಂದಲ್ಲ! ಈ ಪರಿಶ್ರಮದ ಸರಿಯಾದ ಕಲ್ಪನೆಯನ್ನು ನಿಮಗೆ ಮಾಡಿ ಕೊಡುವುದು ಅಶಕ್ಯ! ಅರ್ಜಿಯ ಮೇಲೆ ಅರ್ಜಿಗಳನ್ನು ಮಾಡಬೇಕಾಯಿತು. ಕಡೆಗೆ ಮೊನ್ನೆ ಮೊನ್ನೆ ಕೊನೆಯ ನಿಕಾಲೆಯಾಗಿದೆ.

ತಾರೆ:—ಏನೆಂದು ನಿಕಾಲೆಯಾಯಿತು?

ಲತ್ತೆ:—ನೀವೇ ಸಮಕ್ಷಮ ಬಂದು ನಿಮ್ಮ ಹಣವನ್ನು ತಕ್ಕೊಂಡು

ಹೋಗಿರೆಂದು ಅವರು ನನಗೆ ತಿಳಿಸಿದರು. ನಾನು ನಿನ್ನೆ ಹೋಗಿ ಹಣವನ್ನೂ ತಕ್ಕೊಂಡು ಬಂದೆನು.

ಬಂಡೇರಾಯ:-ನಮ್ಮ ಮೇಲೆ ನಿಮ್ಮ ಉಪಕಾರವು ಬಹಳವಾಯಿತು!

ಲಕ್ಷ್ಮಿ:—ಇದು ಉಪಕಾರದ ಪ್ರಶ್ನೆಯಲ್ಲ; ವ್ಯವಹಾರದ ಪ್ರಶ್ನೆ! ಇಗೋ ನೋಡಿ. ನಿಮ್ಮ ಆ ಲಕ್ಷ ರೂಪಾಯಿಗಳ ಪ್ರಕರಣವು ಇಲ್ಲಿದೆ. ಇದರಲ್ಲಿ ಪ್ರಕರಣಕ್ಕೆ ಸಂಬಂಧಿಸಿದ ಯಾವತ್ತೂ ಕಾಗದ-ಪತ್ರಗಳಿವೆ. ನೋಡಿಕೊಳ್ಳಿರಿ. [ಕೊಡುವನು.] ಈ ಕಾಗದವನ್ನು ನೋಡಿರಿ. (ತೋರಿಸುವನು) ಇದು ನನ್ನ ಮನೆಯ ಖಾತೆಯ ವಹಿಯ ನಕಲು. ಇದರಲ್ಲಿ ನಿಮಗೆ ಸಂಬಂಧಿಸಿದ ಜಮಾಖರ್ಚಿನ ಸಂಕ್ಷಿಪ್ತ ವಿವರಣೆಯಿದೆ. ಇದರಲ್ಲಿ ನಿಮ್ಮ ಆ ಲಕ್ಷ ರೂಪಾಯಿಗಳು ಜಮೆ ಹಿಡಿಯಲ್ಪಟ್ಟಿವೆ. (ಕಾಗದವನ್ನು ನೋಡಿಕೊಳ್ಳುವನು.) ಈ ಜಮಾಖರ್ಚಿನ ಸಹಾಯದಿಂದ ನೋಡಲು, ನಾನು ಇಂದಿನ ಮಿತಿಗೆ ನಿಮಗೆ ರೋಖ ಹದಿಮೂರು ಆಣೆ ಹತ್ತೂವರೆ ಪೈಗಳನ್ನು ಕೊಡಬೇಕಾಗುತ್ತದೆ. ಆ ಹಣವನ್ನೂ ತಂದಿದ್ದೇನೆ; ತಕ್ಕೊಳ್ಳಿರಿ. ಲಕ್ಷ ರೂಪಾಯಿಗಳು ಮುಟ್ಟಿದ ಬಗ್ಗೆ ಪಾವತೀ ಬರಕೊಡಿರಿ.

(ಜಮಾಖರ್ಚಿನ ಕಾಗದವನ್ನು ಕೊಡುವನು. ಹಣವನ್ನು ಇರಿಸುವನು.)

ತಾರೆ:—ಪೂರಾ ಹದಿನಾಲ್ಕು ಆಣೆಗಳು ಸಹ ಉಳಿಯಲಿಲ್ಲವೆ?

ಲಕ್ಷ್ಮಿ:—ಇಲ್ಲ. ನನ್ನ ಜಮಾಖರ್ಚು ತೀರ ಸರಿಯಾದದ್ದು. ಇದರಲ್ಲಿ ಒಂದು ಪೈ ಸಹ ಹೆಚ್ಚುಕಡಿಮೆಯಾಗುವಂತಿಲ್ಲ!

(ಬಂಡೇರಾಯನೂ, ಗುಂಡೇರಾಯನೂ ಹತಾಶರಾಗಿ, ಒಬ್ಬನನ್ನೊಬ್ಬನು ನೋಡುವರು; ಮೂರ್ಛಿತರಾಗಿ ಬೀಳುವರು.)

ಲಕ್ಷ್ಮಿ:—ಅಪ್ಪಗಳಿರಾ, ಮೂರ್ಛೆಹೊಂದಿ ವಿಶ್ರಮಿಸಲಿಕ್ಕೆ ಈಗ ಅವಕಾಶವಿಲ್ಲ; ಏಳಿರಿ. ಈ ಹಣವನ್ನೆಣಿಸಿಕೊಳ್ಳಿರಿ. ಹಂಚಿಕೊಳ್ಳಿರಿ. ಪಾವತಿ ಬರೆದು ಕೊಡಿರಿ. [ಗುಂಡೇರಾಯನೂ, ಬಂಡೇರಾಯನೂ ಮತ್ತೆ ಏಳುವರು; ಹುಚ್ಚರಂತೆ ನೋಡುತ್ತ ನಿಲ್ಲುವರು ]

ತಾರೆ: —ವಕೀಲಸಾಹೇಬರೆ, ನೀವು ನಮ್ಮ ಈ ಕೇಸಿನಲ್ಲಿ ಬಹಳ ಪರಿಶ್ರಮ ಬಟ್ಟವರಾಗಿರುವಿರಿ! ಹೆಚ್ಚಿಗೆ ಇನಾಮು ಕೊಟ್ಟು ನಿಮ್ಮನ್ನು ಸಂತುಷ್ಟ

ರನ್ನಾಗಿ ಮಾಡುವ ಶಕ್ತಿಯು ನಮಗಿಲ್ಲವೆಂಬದನ್ನು ನೀವು ಬಲ್ಲಿರಿ! ನಿಮ್ಮನ್ನು ಬರಿಗೈಯಿಂದ ತಿರುಗಿ ಕಳುಹಿಸಲಿಕ್ಕೂ ನಮ್ಮ ಮನಸ್ಸು ಒಪ್ಪದಾಗಿದೆ! ಕಾರಣ ನಾನು ಈ ಹಣವನ್ನು ನಿಮ್ಮ ಎಲೆಯಡಿಕೆಗೆಂದು ನಿಮಗೆ ಸಮರ್ಪಿಸುವೆನು. ನೀವಿದನ್ನು ಸ್ವೀಕರಿಸಿ, ಅನುಗ್ರಹಿಸಬೇಕು.

[ವಕೀಲನು ಕೆಳಗಿರಿಸಿದ್ದ ಹಣವನ್ನು ತಕ್ಕೊಂಡು ವಕೀಲನಿಗೆ ಕೊಡುವಳು.]

ಲಕ್ಷ್ಮಿ:—ಭಕ್ತನು ಒಂದು ತುಳಸಿಯ ದಳವನ್ನು ಏರಿಸಿದರೂ ಭಗವಂತನು ಪ್ರೇಮದಿಂದ ಸ್ವೀಕರಿಸುವಂತೆ, ಪಕ್ಷಕಾರರು ಒಂದು ಪೈಯನ್ನು ಕೊಟ್ಟರೂ ನಾನದನ್ನು ಸಂತೋಷದಿಂದ ತಕ್ಕೊಳ್ಳುವದು ನನ್ನ ಕರ್ತವ್ಯವೆಂದು ತಿಳಿಯುತ್ತೇನೆ. (ಹಣವನ್ನು ತಕ್ಕೊಳ್ಳುವನು) ತಮ್ಮಗಳಿರಾ, ಹೀಗೆ ದಂಗು ಬಡೆದು ಏಕೆ ನಿಂತುಕೊಂಡಿರಿ? ಲಕ್ಷ ರೂಪಾಯಿಗಳು ನಿಮಗೆ ಮುಟ್ಟಿದವಷ್ಟೆ? ಇಲ್ಲಿ ರಸೀದಿಯಿದೆ, ಫೌಂಟೆನ್ನಪೆನ್ನಿದೆ. ತಕ್ಕೊಳ್ಳಿರಿ. ಬೇಗ ಸಹಿಮಾಡಿಕೊಡಿರಿ. ನನಗೆ ಬಹಳ ಕೆಲಸಗಳಿವೆ. ಬೇಗ ಹೋಗಬೇಕು. (ಬಂಡೇರಾಯನೂ, ಗುಂಡೇರಾಯನೂ ಹಾಗೆ ಮಾಡುವರು ವಕೀಲನು ರಸೀದಿಯನ್ನು ತಕ್ಕೊಂಡು ಎದ್ದುನಿಂತು) ತಾರಾಬಾಯಿಯವರೆ, ಇನ್ನು ನಾನು ಹೋಗಿ ಬರುವೆನು; ನಮಸ್ಕಾರ! [ಹೋಗುವೆನು]

ತಾರೆ:—ಪ್ರಿಯತಮ, ಪ್ರಿಯ ಮೈದುನ, ಹೀಗೆ ಹತಾಶರಾಗಬೇಡಿರಿ. ಒಂದು ದೃಷ್ಟಿಯಿಂದ ಆ ಲಕ್ಷ ರೂಪಾಯಿಗಳು ನಮ್ಮ ಕೈಸೇರದಿರುವುದೇ ಒಳಿತಾಯಿತೆಂದೆನ್ನಬೇಕು! ಯಾಕೆಂದರೆ, ಆ ಲಕ್ಷ ರೂಪಾಯಿಗಳ ಗಂಧವು ತಾಕುತ್ತಲೆ, ನಮ್ಮ ಮನೆಯಲ್ಲಿ ಅನರ್ಥ ಪರಂಪರೆಗಳೆದ್ದವು. ಮೊದಲು ಸೋದರತ್ತೆ ಬಂದಳು. ಅವಳೆಲ್ಲಿಯವಳೊ! ಯಾವ ಜಾತಿಯವಳೋ? ಆ ಮೇಲೆ ಕಮಲೆಯು ಬಂದಳು. ಕಂಡ ಕಂಡವರಿಗೆ ಗಂಡನೆಂದು ಕರೆದು, ಸಲಿಗೆ ಮಾಡ ಹೋಗುವ ಆ ಹೆಂಗಸು, ಕುಲೀನಳಲ್ಲವೆಂಬುದನ್ನು ಬೇರೆಯಾಗಿ ಊಹಿಸಲಿಕ್ಕೆ ಬೇಡ ಬಳಿಕ ಬಂದ ಗುಂಡೇರಾಯನು ನಾಟಕದ ಸೋಗುಗಾರನು. ಇವರೆಲ್ಲರೂ ನಮ್ಮ ಮನೆಯಲ್ಲಿ ವ್ಯವಹರಿಸಿ, ನಮ್ಮನ್ನು ಜಾತಿಭ್ರಷ್ಟರನ್ನಾಗಿ ಮಾಡಿದ್ದಾರೆ. ಇದಕ್ಕಾಗಿ ನಾವು ಮೊದಲು ಪ್ರಾಯಶ್ಚಿತ್ತವನ್ನು ತಕ್ಕೊಳ್ಳಲಿಕ್ಕೆ ಬೇಕು! ಮನೆಯನ್ನು ಶುದ್ಧಗೊಳಿಸಲಿಕ್ಕೆ ಬೇಕು!

ಬಂಡೇರಾಯ:—ಇದೆಲ್ಲವೂ ನಿಜ. ಮುಂದೇನು? ಮತ್ತೆ ಆ ಸಾಲಗಾರರ ಉಪದ್ರವ! ಈ ಸಲ ಅವರು ನನ್ನನ್ನು ಹರಿದು ತಿನ್ನುವರು!!

ಗುಂಡೇರಾಯ:—ನನ್ನ ಅವಸ್ಥೆಯೂ ಹೀಗೆಯೇ ಇತ್ತು; ಆದರೆ ನಾನು ಮೊನ್ನೆ ಮೊನ್ನೆ ಇಲ್ಲಿಗೆ ಹೊಸದಾಗಿ ಬಂದವನಾದ್ದರಿಂದ, ನಾಲ್ಕೆಂಟು ದಿನಗಳನ್ನು ಹೇಗಾದರೂ ಕಳೆಯಬಲ್ಲೆನು.

ತಾರೆ:—ಪ್ರಿಯತಮ, ವ್ಯಸನಗೊಳ್ಳದಿರಿ. ಲಕ್ಷ್ಮೀಪುತ್ರರಾಗಿರುವುದು ನಿಮ್ಮ ಭಾಗ್ಯದಲ್ಲಿಲ್ಲ. ಒಂದು ಕಾಲದಲ್ಲಿ ಲಕ್ಷ್ಮೀಪತಿಗಳಾಗಿ ಉಪಭೋಗಿಸಿ ಬಿಟ್ಟಿರುವಿರಿ. ಇನ್ನು ಆ ಹಂಬಲವು ಬೇಡ! ನಾವು ಯಾವುದೊಂದು ಸರಿಯಾದ ಹೋರೆಯನ್ನವಲಂಬಿಸಿ ಹೊಟ್ಟೆ ಹೊರಕೊಂಡು ಮರ್ಯಾದೆಯಿಂದಿದ್ದರೆ ಸಾಕು. ನಾವಿನ್ನು ಈ ನಗರದಲ್ಲಿರುವುದು ಬೇಡ. ದೂರ ದೇಶಕ್ಕೆ ಹೋಗೋಣ. ಪ್ರಿಯ ಮೈದುನನೆ, ನೀನೂ ಬರುವಿಯಷ್ಟೆ?

ಗುಂಡೇರಾಯ:—ಬರುವೆನು.

ತಾರೆ:—ನಡೆಯಿರಿ. ನಾಳೆಯೇ ಹೊರಡೋಣ. ನೀವಿಬ್ಬರು ಯಾವದೊಂದು ಧಂದೆಯನ್ನವಲಂಬಿಸಿ ದುಡಿಯಿರಿ. ನಾನು ಮನೆಗೆಲಸಗಳನ್ನು ಸರಿಯಾಗಿ ಸಾಗಿಸಿಕೊಂಡು ಹೋಗುವೆನು.

ಬಂಡೇರಾಯ-ಗುಂಡೇರಾಯ:—ತಥಾಸ್ತು!

---

—( ಸಂಪೂರ್ಣಂ. )—